

ಶ್ರೀರಸ್ತು.



ಶ್ರೀಗಣೇಶಾಯನಮಃ

# ನಕ್ಷತ್ರಚೂಡಾಮಣಿಃ.

ಶ್ಲೋಕ ॥ ಆದಿತ್ಯಮಾರಾಧ್ಯಸಪದ್ಮನಾಭೋ। ನಕ್ಷತ್ರಚೂಡಾಮಣಿಮಾಚಕಾರ ॥ ಆಲೋಕ್ಯಸರ್ವಾಅಪಿಸಂಹಿತಾಶ್ಚ । ಸಾರಾರ್ಥರೂಪಂ ಸುಜನೋಪಕಾರಂ ॥ ತಾತ್ಪರ್ಯ ॥ ಪದ್ಮನಾಭದ್ವಿಜನು ಸೂರ್ಯ ಪ್ರಸಾದದಿಂದ ಜ್ಯೋತಿಸ್ಸಂಹಿತೆಗಳನ್ನು ಹುಡುಕಿ ಸಾರವನ್ನು ಸಂಗ್ರಹಿಸಿ ಸುಜನರಿಗೆ ಉಪಕಾರವಾಗಿರುವಂತೆ ನಕ್ಷತ್ರ ಚೂಡಾಮಣಿ ಎಂಬ ಗ್ರಂಥವನ್ನು ರಚಿಸಿದನು. ... ... *

## ಅಶ್ವಿನೀ ನಕ್ಷತ್ರಕ್ಕೆ.

ಶ್ಲೋಕ ॥ ಹಸ್ತ್ಯಶ್ವಬಂಧರಥಯಾನಪುರಪ್ರವೇಶ । ಭೈಷಜ್ಯಮಂತ್ರಗೃಹಹರ್ಮ್ಯಸರಃಪ್ರತಿಷ್ಠಾ॥ ಯಾತ್ರಾಭಿಷೇಕಮುಖದೀಕ್ಷಣ ಚೌಲಮೌಂಜೀಬಂಧಃಕುರ್ವಂತಿಶಾಂತಿಕವಿಧಾನ ಮಥಾಶ್ವಿನೀಷು ॥ ತುರಗಮುಖತುಲ್ಯಮೂರ್ತಿ । ಸ್ತ್ರೀತಾರಕಾಕ್ಷಿಪ್ರಗಾಮಿನೀತಿರ್ಯಕ್ ॥ ಚೂಚೇಚೋಲಾಅಶ್ವಿ । ನ್ಯಾನೀಲಾದಸ್ರ ದೇವತಾಜಯುತಿ ॥ ಅಶ್ವಿನೀ ನಕ್ಷತ್ರಸ್ಯಾಶ್ವಿನೌ ದೇವತೆ। ಪೂಷಾಧಿದೇವತಾ । ಯಮಪ್ರತ್ಯಧಿದೇವತಾ । ಚೂಚೇಚೋಲಾಕ್ಷರಾಧಿಕಾರಃ । ನಕ್ಷತ್ರಗೋಳತ್ರಯಿಕಾ । ತುರಗಯೋನಿಃ । ಕೃಷ್ಣವರ್ಣಾಭಿಮಾನಿನೀ । ದೇವಗಣಃ । ವೈಶ್ಯಜಾತಿಃ । ಕ್ಷತ್ರಬೀಜಂ । ಆರೋಗ್ಯಕರಂ।ಚತುಷ್ಪಾತ್ । ತಿರ್ಯಙ್ಮುಖಂ । ಮಂದಲೋಚನಂ। ಕ್ಷಿಪ್ರಕಾರ್ಯಂ। ಪಾರ್ಶ್ವನಾಡೀ । ಪಾದರಜ್ಜುಃ । ಮೇಷರಾಶಿಃ । ಅಂಗಾರಕಗ್ರಹಃ । ಪಟ್ಟಣಸ್ಥಾನಂ ವಾಯುಮಂಡಲಂ । ಮುಷ್ಟಿವೃಕ್ಷಃ । ಭೇರುಂಡಪಕ್ಷೀ । ಚಂದ್ರಸಮಕಕ್ಷ್ಯಾಯಾಂ ಪಂಚಾಶದ್ಘಟಿಕಾಭೋಗಾನಂತರಂವಿಷೋತ್ಪತ್ತಿಃ। ದ್ವಿಚತ್ವಾರಿಂಶದ್ಘಟಿಕಾಭೋಗೋಪರ್ಯಮೃತಸಮಯಃ। ಯಾತ್ರಾಯಾಂ ಮಾಷಭಕ್ಷಣೆ ಜಯಃ । ಸರ್ವದಿಕ್ಷುಪ್ರಯಾಣಂಶುಭದಂ । ಪುಂಜನನೆ ನವದಿನಾರಿಷ್ಟಂ । ಸ್ತ್ರೀಜನನೇತುನದೋಷಃ । ಜ್ವರಾದಿರೋಗೋತ್ಪತ್ತೌ ನವದಿನಾನಂತರಮಾ

ರೋಗ್ಯಂಭವತಿ। ಶ್ವೇತವಸ್ತ್ರಾಲಂಕಾರಭೂಷಿತಾಂಕಮಂಡಲಂಧಾರಿಣೀ ಮಮೃತಹಸ್ತಾಂಯುಮಳರೂಪಾಂ ದ್ವಿಭುಜಾಮಿಕ್ಷ್ಣು, ರಸಪೂರ್ಣಕಲಶಧಾರಿಣೀಂ ಪುರುಷಾಕೃತಿ ಮಶ್ವಿನೀದೇವತಾಪ್ರತಿಮಾಂ ಸೌವರ್ಣೀಂ ಮಾರಾಧಯೇತ್ । ಶ್ರೀಗಂಧಗುಗ್ಗುಲಂ ನೀಲಾರುಣ ಪಾಟಲವಸ್ತ್ರೈಃಕ್ಷೀರಾನ್ನ ಕುಳುತ್ಥಾಕ್ಷತೈರರ್ಚಯೇತ್ । ದೇವಸ್ಯತ್ವೇತಿಪ್ರಧಾನಮಂತ್ರಃ । ದ್ವಿಶತೋತ್ತರಸಹಸ್ರಜಪಃ । ನಕ್ಷತ್ರೇಷ್ಟಿವನ್ಮಹಾಶಾಂತೌ । ಲಘುಶಾಂತೌಪಿಷ್ಟಾಶ್ವದಾನಂ। ವಿಷದುತ್ತರಣೇನೀಲಾಶ್ವಂದಕ್ಷಿಣಕರ್ಣೇ ಗೃಹೀತ್ವಾದದ್ಯಾತ್। ಯಥಾಪ್ರಕರಣಂಶಾಂತಿ ಕಲ್ಪಾನುಸಾರೇಣಹೋಮಃ । ಪೂರ್ವಾಹ್ನೆ ನೈಋತ್ಯದೇಶೇಮಾಷಾನ್ನಬಲಿಂಹರೇತ್ । ವಿಪ್ರಯುಗ್ಮಂಭೋಜಯೇತ್ । ಹಿರಣ್ಯಂದಕ್ಷಿಣಾ। ನವಾಹಾತ್ಸುಖೀಭವತಿ । ಕಳಿಂಗಸಾರ ರಸಭಸ್ಮಮಾತ್ರಯಾ ಮಾಷಪರಿಮಿತಯಾವಿರೇಚಯೇತ್ತ್ರಿದೋಷಶಾಂತಿಃ । ಅಶ್ವಗಂಧಾನುಪಾನೇನದೇಹಾರೋಗ್ಯಂಭವೇತ್। ಮುಷ್ಟಿಸಾರಣ ಸರ್ಷಪಮಿತೇನವಿಷನ್ನಿವೃತ್ತಿಃ ಕ್ಲೀಬತ್ವಪರಿಹಾರಶ್ಚ। ತುರಗಖುರಪತ್ರರಸೇನ ಕುಷ್ಠನಿವೃತ್ತಿಃ ! ಮುಷ್ಟಿಮೂಲಗಂಧಲೇಪೇನ ಚರ್ಮರೋಗನಿವೃತ್ತಿಃ । ಘೋಟಪುರೀಷರಸತಸ್ಸನ್ನಿಪಾತಜಯಃ। ತಸ್ಯಶಾಕೇನಶೀತವಾತಯಾತನಾನಿವೃತ್ತಿಃ । ಕುಳುತ್ಥರಸಾನ್ನಪಥ್ಯೇನಕಾಮಿಲಾದಿ ಶೀತಪೈತ್ಯಪರಿಹಾರಃ । ಖರ್ಜೂರವರ್ಜಂ ಹಿಂಗುಸೇವನೇವಾತಶೂಲನಿವೃತ್ತಿಃ । ಸೂರಣೇನಗುದಕೀಲನಿವೃತ್ತಿಃ ಶಸ್ತ್ರಚಿಕಿತ್ಸಾಯಾಂ ಪಾದಮಂಡಲೆ ವ್ರಣಜಯಃ । ಅಶ್ವಗಂಧಾದಿರಸಾಯನೇನ ಮೇಹಪಿತ್ತಕ್ಷಯನಿವೃತ್ತಿಃ।ಭೃಂಗಾಮಲಕತೈಲೇನನೇತ್ರರೋಗಪರಿಹಾರಃ। ನಿಲೀರಸೇನೇಕ್ಷಣಪಟಲಚ್ಛೇದಃ। ಕಾಚಿಕಾರಸೇನರಾತಾಂಧಾರೋಗ್ಯಂ । ಪುನರ್ನವಾದಿ ಕಜ್ಜಲೇನ ನೇತ್ರದೃಷ್ಟಿಪ್ರಸಾದಃ। ರಸಸಾಧನೆ ಮಂಡಲಾತ್ಸಿದ್ಧಿಃ ।ಗಂಧಕಸಾಧನೇತ್ವಯನಂ । ತಾಳಕಶುದ್ಧಾವತ್ಸರಃ । ವಿಷಪಾಷಾಣಾದೀನಾಮಮೃತೀಕರಣೇ ಪ್ರಶಸ್ತಂ । ನವಲೋಹಭಸ್ಮನಿದಿವಾ । ಯಂತ್ರಮಂತ್ರಾದೀನಾಂರಾತ್ರಿಃಪ್ರಶಸ್ತಾ । ಚಿಕಿತ್ಸಾರಂಭಃಪ್ರಾತರೇವ। ವಿದ್ಯಾಭ್ಯಾಸೆ ಝಡಿತಿಜ್ಞಾನೋತ್ಪತ್ತಿಃ । ಖುರಳೀಸಾಧನೆ ಕಾಯಕಾರ್ಶ್ಯಕಾಠಿನ್ಯಂ। ಗಾನಸಾಧನೇಸ್ವರಭಂಗಃ। ನಿಷೇಕೆ ಪ್ರಥಮಗರ್ಭಸ್ರಾವಃ । ನಿಕ್ಷೇಪೋತ್ಖಾತನೇತ್ವಾಕಸ್ಮಿಕರೋಗೋತ್ಪತ್ತಿಃ। ನಿಧ್ಯಂಜನೌಷಧೀಗ್ರಹಣೇಕ್ಷಿಪ್ರಸಿದ್ಧಿಃ। ಮಂತ್ರಜಪಾರಂಭೇತ್ವವಿಘ್ನಂ। ಚೌರ್ಯೆಶಿಕ್ಷಣಂ । ನಷ್ಟದ್ರವ್ಯಂದಿನತ್ರಯೇದೃಶ್ಯತೆ । ಗೃಹಾರಂಭೇ ಕ್ಷಿಪ್ರಪೂರ್ತಿರನಾ

ಮಯಂಭಗಶ್ಚ। ಶಿಲ್ಪೇತ್ವನಾಘಾತಃ। ಕೂಪಾದೌ ಶೋಷಣಂ। ರಸವಾದೇಭೈಷಜ್ಯಲಾಭಃ । ಗುರ್ವಿಣೀವೇದನಾಯಾಂ ಶೀಘ್ರಂಸುಖಪ್ರಸವಃ । ಪಶುಸಂಗ್ರಹಣೇತ್ವನಾಮಯಂ । ಶಕಟಯಾತ್ರಾಯಾಂಲಾಭಃ । ವಾಣಿಜ್ಯೇಜೀವನಮಾತ್ರಪ್ರಾಪ್ತಿಃ। ಯುದ್ಧಾರಂಭೇವಿವಾದೇಚೋಭಯೋಸ್ಸಂಧಿಃ। ಅಶ್ವಗ್ರಹಣೇಭಾಗ್ಯೋದಯಃ। ಸ್ತ್ರೀಸಂಗ್ರಹಣೇರೋಗಃ। ರತ್ನಕ್ರಯೇಚಿರೇಣಕಿಂಚಿಲ್ಲಾಭಃ । ಧಾನ್ಯವಿಕ್ರಯಣೇ ಸದ್ಯೋಲಾಭಃ । ಬೀಜಾವಾಪೇ ಫಲಕಾರ್ಶ್ಯಂ। ನೂತನವಸ್ತ್ರಧಾರಣೇ ಚಿರಾಯುವಸ್ತ್ರಲಾಭಃ । ಕ್ಷೌರೇತ್ವಪಮೃತ್ಯುಪರಿಹಾರಃ। ಅಭ್ಯಂಜನೇ ಬಲಾಧಿಕ್ಯಂ । ದೂರಯಾತ್ರಾಯಾಂ ಕ್ಷಿಪ್ರಾಗಮನಂ। ಆಗಮನಪ್ರಶ್ನೆ ದಿನತ್ರಯೇ ವಾರ್ತಾಶ್ರವಣಂ । ಸಂತಾನಪ್ರಶ್ನೆ ಸಾವಕಾಶಃ। ಮರಣಸಂಶಯೇ ಜೀವತಿ । ರಾಜಕೋಪೇದುರ್ಗಸಂಕಟಪರಿಹಾರಃ। ಅಪರಾಧೇನಿಗಳಬಂಧನಂ । ಸನ್ಯಾಸೇಕ್ಷಿಪ್ರಮನಾಯಾಸ ಮರಣಂ। ಋಣಗ್ರಹಣೇಕ್ಷಿಪ್ರನಿವೃತ್ತಿಃ । ಪಿಶಾಚಾವೇಶೇಕ್ಷಿಪ್ರವಿಮೋಚನಂ । ಅಯಸ್ತಾಪೇತ್ವಗ್ನಿಭಯಂ। ಪಾಷಾಣಭೇದನೇ ರಕ್ತದರ್ಶನಂ। ಸುಧಾಭಾಂಡಾದಿ ದಹನೇಕ್ಷೇಮಃ। ಗಂಧೇಂಗಾಲಾದಿಪೇಷಣೇತ್ವಭಯಂ । ತುನ್ನವಾಯಕ್ರಿಯಾರಂಭಃ ಫಲಕರಃ । ನಾಟ್ಯಾರಂಭೇ ಧನಹಾನಿಃ । ನಾಪಿತಕ್ರಿಯಾರಂಭೇ ಧನಾಪ್ತಿಃ । ಪಶ್ವಾಲಂಭನೇ ತಂತ್ರಲೋಪೋಮಂತ್ರವೈಕಲ್ಯಂಚ । ಮಹಾರ್ಘಗ್ರಹಣೇ ಜನವಿರೋಧಃ । ಮುದ್ರಾಧಾರಣೇ ತ್ವಧಿಕಾರಭಂಗಃ । ಮೈತ್ರೀಕರಣೇ ಝಟಿತಿಫಲಂ । ದ್ರವ್ಯನಿಕ್ಷೇಪೇಹಾನಿಃ । ಶಪಥೇಸಿದ್ಧಿಃ । ವ್ರತಾರಂಭೇ ನಿರ್ವಿಘ್ನಸಮಾಪ್ತಿಃ। ಆರಾಮಕ್ರಿಯಾಯಾ ಮನ್ಯಾಕ್ರಾಂತತಾ। ದೋಹಳಂ ಫಲಕರಂ । ಗವೇಷಣೇತ್ವಿಷ್ಟಸಿದ್ಧಿಃ । ಯಂತ್ರಧಾರಣೇ ತ್ವನಿಷ್ಟನಿವೃತ್ತಿಃ । ಆದಿತ್ಯವಾರೇನಂದಯೋಗಃ । ಅಮಾಯಾಮಗ್ನಿಯೋಗಃ । ಸಪ್ತಮ್ಯಾಂದಾಹಯೋಗಃ। ಸೋಮವಾರೇಶುಭಯೋಗಃ। ಮಂಗಳವಾರೇ ಅಮೃತಸಿದ್ಧಯೋಗಃ। ಸಪ್ತಮೀ ಮಂಗಳವಾರಸಹಿತೇ ನಾಶಯೋಗಃ। ಬುಧೇ ಮೃತ್ಯುಯೋಗಃ। ಗುರೌ ಶೂಲಯೋಗಃ। ಶುಕ್ರೇ ಶುಭಯೋಗಃ । ಶನೌ ಜಯದಿನೇ ನಿರ್ಜೀವಯೋಗಃ । ಅಶ್ವಿನೀ ಸ್ಥಿತೇ ಚಂದ್ರಮಸಿ ಪೂರ್ವಫಲ್ಗುನೀಸ್ಥಿತೇ । ಕ್ರೂರಗ್ರಹೇ ಮಹಾಶೂಲಯೋಗಃ । ಮಧ್ಯಾಹ್ನೇರಕ್ತಮೇಘದರ್ಶನೇವೃಷ್ಟಿಃ । ಚೈತ್ರಮಾಸೇ ಶೂನ್ಯನಕ್ಷತ್ರಂ ಭವತಿ । ಉತ್ಪಾತದರ್ಶನೇ ವಾಯುವೃದ್ಧಿಃ। ಸಂಕ್ರಮೇಪ್ರತಿಪತ್ಸಹಿತೇಮಧ್ಯಾರ್ಘಃ। ಪ್ರಥಮರಜಸ್ವಲಾ ಸೌಭಾಗ್ಯಶಾಲಿನೀ ಪುತ್ರವತೀಚಭವಿಷ್ಯತಿ । ಸ್ತ್ರೀಸಂ

ಭೋಗನಾಮಕರಣಾನ್ನ ಪ್ರಾಶನ ಚೌಲೋಪನಯನಾಕ್ಷರಾಭ್ಯಾಸ ವೇದ ಶಾಸ್ತ್ರಾರಂಭ ತೈಲಾಭ್ಯಂಗನವ ವಸ್ತ್ರಾಭರಣ ಛತ್ರಚಾಮರಾಂದೋಳನಗ ಜಾಶ್ವಾರೋಹಣ ವಾಸ್ತುಕರ್ಮಚಿತ್ರಲೇಖನಭೂಕರ್ಷಣಬೀಜಾವಾಪನಾಳಿ ಕೇರವೃಕ್ಷಸ್ಥಾಪನಯಾತ್ರಾಯುದ್ಧ ಛದ್ರಾಕರಣ ಭೈಷಜ್ಯಾದಿ ಶುಭಕಾರ್ಯೇ ಷ್ವಶ್ವಿನೀಶಸ್ಯತೆ । ಅಶ್ವಿನ್ಯಾಂ ಸ್ತ್ರೀಯುಗ್ಮಜನನೆ ಮಾತೃಗಂಡಃ । ಪುಂಯ ಮಳಜನ್ಮನಿ ಪಿತೃಗಂಡಃ । ಸ್ತ್ರೀಪುಂಜನನೆ ತ್ವನ್ಯತರಶಿಶುಹಾನಿಃ ।

ದೀರ್ಘಬಾಹುರ್ವಿಶಾಲಾಕ್ಷೋರಾಜಪೂಜ್ಯಸ್ಸುಭಾಷಿತಃ। ಸುರೂಪಸ್ಸು ಭಗಸೂಕ್ಷ್ಮನಖರಸ್ಸಾಹಸೀಭಿಷಕ್। ಚೋರೋದುಸ್ಸಹವಾಸೀಚದುರಾಚಾ ರೊದುಷ್ಟಭುಕ್ । ದಯಾಶೂನ್ಯೋರ್ಥಲುಬ್ಧಶ್ಚ ಡಾಂಭಿಕಃಪರವಂಚಕಃ । ಮಿಥ್ಯಾವಾದೀಗೂಢಪಾಪಃ ಪಂಡಿತಃ ಪರಕಾರ್ಯಕೃತ್ । ಧೈರ್ಯವಾನ್ಮ ತಿಮಾನ್ಯೋಗೀಪಾಚಕೋಲ್ಪಾಶನಸ್ಸುಖೀ । ಅಂಗದಕ್ಷಲ ಚಿತ್ತಶ್ಚ ಪ್ರವಾಸೀ ಕಟಿಚಿಹ್ನಿತ, । ಸ್ಥಿರಾರಂಭೋದೀರ್ಘದರ್ಶೀ । ಪರಸ್ತ್ರೀ ಗಮನಾತುರಃ। ಪರಾಧೀನಶ್ಚಬಲವಾ । ನಶ್ವಿನ್ಯಾಂಜಾಯತೇನರಃ । ಪ್ರಥಮಪಾದೆ ತಸ್ಕರಾಂ ಶಃ। ಕುಜಃ। ಧಾತ್ವಗ್ನಿಪ್ರಹರಣ ಸಾಹಸವಾ । ಪಿಶುನಃ। ಪರಸ್ತ್ರೀರ ತಃ । ದ್ವಿತೀಯಪಾದೆ ಭೊಕ್ತಾಂಶಸ್ಯಶುಕ್ರಃ । ಧಾರ್ಮಿಕಃ । ತೇಜಸ್ವೀ । ಧ ನಧಾನ್ಯಸಮೃದ್ಧಃ । ತೃತೀಯಪಾದೆ ವಿಚಕ್ಷಣಾಂಶಸ್ಯಬುಧಃ । ಉತ್ಪನ್ನ ಭಕ್ಷಕಃ। ಬಹುವಿದ್ಯಾವಿತ್ । ಭೋಗೀ। ಚಿಂತಾಕುಲಃ। ವಿವಾದವಿಜಯೀ ಕಲಹಶೂರಃ। ಚತುರ್ಥಪಾದೆ ಧನಾಂಶಸ್ಯಚಂದ್ರಃ। ದೇವಪೂಜಾಪರಃ। ಧ ರ್ಮಕರ್ತಾ । ಸ್ತ್ರೀಪ್ರಸಾದೀ । ಅಶ್ವಿನೀಜಾತೋದಿವಾಬಲವಾ। ಆದ್ಯಂ ತನಕ್ಷತ್ರಸ್ಯ ಪರಾಶರಮತೆ ಕೇತುದಶಾಸಪ್ತವಾರ್ಷಿಕೀ । ಅನಯಾಯಾಮಶ್ವಿ ನೀಭವಸ್ಯರಾಜಯೋಗೋಭಂಗಶ್ಚ। ಗುರೌಚಂದ್ರಯುಕ್ತೆ ರಾಜಾಧಿಕಾರ ಜೀವನಂ । ಶುಕ್ರಕುಜಯೋಗೆಕಳತ್ರಭಂಗಃ । ಬುಧಶುಕ್ರಯೋಗೆ ಸ್ತ್ರೀ ಮಾಲಕವೃಣಾಧಿಕ್ಯಂ । ಗುರುಶನಿಯೋಗೆ ರಾಜರ್ಷಿತುಲ್ಯಃ। ರವಿಶನಿ ಯೋಗೆ ಜನವಿರೋಧೋಧಿಕಾರಾದ್ಧನಲಾಭಶ್ಚ। ಕುಜಬುಧರಾಹುಯೋಗೆ ರೋಗಪೀಡಿತಃ। ಶುಕ್ರರವಿರಾಹುಯೋಗೆ ತತ್ಪ್ರಿತುಃ ಕಳತ್ರಸ್ಯವಾನೇತ್ರರೋ ಗಃ । ಚಂದ್ರೋಪರಾಗೆ ತ್ವಂಗಹಾನಿಃ। ಸಿಹ್ಮಾಂಗಾರಕೇಶ್ವಿನೀಜಾತಸ್ಯಪು ತ್ರಶೋಕಪ್ರಾಪ್ತಿಃ । ವ್ಯಾಳದ್ರೇಕ್ಕಾಣೆ ಕುಜಶ್ಚೇತ್ಸರ್ಪಗಂಡಃ । ಗುರುದೃ ಷ್ಟ್ಯಾತತ್ಪರಿಹಾರಃ । ಶುಕ್ರದಶಾಕಾರಾ। ಶುಕ್ರಯುಕ್ತೋ ರಾಹುರ್ವಾ

ರಕಃ । ಸ್ತ್ರೀಧನಮಾಲೋಮೃತ್ಯುಃ । ಅಶ್ವಿನ್ಯಾದೌ ಘಟಿಕಾದ್ವಯಜನನೆ ಅಭುಕ್ತಗಂಡಃ । ಚಂದ್ರೇಸಶತನೌ ಬಾಲಾರಿಷ್ಟಂ । ಅಶ್ವಿನೀಜಾತಕಸ್ಯ ಪ್ರಥಮಾಬ್ದೆಗ್ನಿಚಿಕಿತ್ಸಾ । ದ್ವಿತೀಯೆಜ್ವರಃ । ತೃತೀಯೆಕುಕ್ಷಿರೋಗಃ । ಚತುರ್ಥೆಪಂಚಮೆವಾಕ್ಷಿಪೀಡಾ । ಷಷ್ಠೆಸಪ್ತಮೆವಾಧನವ್ಯಯಃ । ದಶಮೇವಿಂಶತಿತಮೇವಾಅಪಮೃತ್ಯುಃ । ಚತುರ್ವಿಂಶತ್ಯಬ್ದೇಮೃಗಭಯಂ । ಚತ್ವಾರಿಂಶದಬ್ದೆವ್ಯಾಧಿಃ । ಚತುಷ್ಷಷ್ಟಿತಮವತ್ಸರೆ ಮಹಾವ್ಯಾಧಿಃ । ಮಿಥುನಕನ್ಯಾಮಕರೆಷುಗೋಚಾರಕಾಲೆರವಿಕುಜಶಯನಃ ಫಲದಾಯಕಾಃ। ವೃಷಸಿಂಹತುಲಾಧನುಃ ಕುಂಭೆಷುಗುರುಸಂಚಾರಕಾಲೆ ಧನಲಾಭಸ್ಸತ್ಕಾರ್ಯ ಮೂಲಕೋಧನವ್ಯಯಃ ಕಲ್ಯಾಣಯೋಗಶ್ಚ । ಮೀನಾದಿರಾಶಿತ್ರಯಚಾರೇಣ ಶನಿಸ್ಸಪ್ತವಾರ್ಷಿಕಾನಿಷ್ಟಕೃತ್ । ಕುಳೀರಾದಿರಾಶಿದ್ವಯೆತು ಪಂಚವಾರ್ಷಿಕಾನರ್ಥಕರಃ। ವೃಶ್ಚಿಕಸ್ಥಿತಿಕಾಲೇ ಶನಿಸ್ಸಾರ್ಧಾಬ್ಧ ಯುಗಳಂಕಷ್ಟಕಾರಿ । ಪ್ರಥಮ ಪರಿವರ್ತನೇಶನಿರತಿಕಷ್ಟಂನಕರೋತಿ । ದ್ವಿತೀಯೇಧನಮಾನಬಂಧುವಿಯೋಗಾಃ। ತೃತೀಯೆತ್ವಾಯುಃಕೃಂತತಿ । ಯದಿಜನ್ಮನಿ ಶನಿರ್ವಿನೇಸ್ಥಿತೋನಧನಮಾನಹಾನಿಂಯಚ್ಛತಿ । ವೃಷೇತು ಶುಭದಮೇವನಕದಾಪಿಶನಿಃ ಪಾಪಫಲಪ್ರದೋಭವೇತ್ । ಗುರುದೇವತಾಬಲಮಸ್ತಿಚೇತ್ಸರ್ವಾನಿಷ್ಟಪರಿಹಾರೋಭವೇತ್। ಆಸತಿ ಬಾಧಕೆಷಣ್ಣವತ್ಯಬ್ದಪರಿಮಿತಮಾಯುಃ । ಕಲ್ಪ ಸಾಧನೆಯೋಗಸಾಧನೆ ರಸಸಿದ್ಧೌದೈವಪ್ರಸಾದೆಮಹದನುಗ್ರಹೆ ನಿಷ್ಪಾತಕೆ ಮಹಾಪುಣ್ಯೈಚಾಮಿತಮಾಯುಶ್ಚಿರಂಜೀವತಿ । ಅಶ್ವಿನ್ಯಾಂಯದಿಕಶ್ಚಿದ್ದೇಹೆಮರಿಷ್ಯತಿತದಾಕ್ರೂರವಾರೇಪಿತಸ್ಮಿನ್ನಬ್ದೆಪ್ರಾಣ್ಯಾಂತರೆಮರಣಂನಸಂಭವತಿ । ಅಶ್ವಿನ್ಯಾಂ ಶಿವಲಿಂಗ ರುದ್ರಾಕ್ಷರತ್ನಗರ್ಭಗಣೇಶಸ್ವರ್ಣ ಗರ್ಭಾಂಬಿಕಾಸಾಲಗ್ರಾಮ ಗೋಗಂಗಾಮಹಾಮಂತ್ರಪ್ರಾಪ್ತೌ ಭೋಗಭಾಗ್ಯಶುಭಪರಂಪರಾಯಾ ಉತ್ತರೋತ್ತರಾಭಿವೃದ್ಧೇಶ್ರೇಯೋಲಾಭಇತ್ಯಶ್ವಿನೀನಕ್ಷತ್ರವಿಚಾರಃ॥ ೧॥

ತಾತ್ಪರ್ಯ ॥ ಅಶ್ವಿನೀ ನಕ್ಷತ್ರಕ್ಕೆ ಸಮಸೂತ್ರಸ್ಥಾನದಲ್ಲಿ ಚಂದ್ರನು ಬಂದಿರುವಾಗ - ಅಂದರೆ ಪಂಚಾಂಗದೊಳಗೆ ನಿತ್ಯನಕ್ಷತ್ರ ಅಶ್ವಿನಿಯೆಂದು ಎಷ್ಟು ಘಳಿಗೆಗಳು ಬರೆಯಲ್ಪಟ್ಟಿರುತ್ತವೆಯೋ ಆ ಹೊತ್ತಿನಲ್ಲಿ ಕರ್ಮಫಲಗಳನ್ನು ನಿರ್ಣಯಿಸುತ್ತಾನೆ. ಹ್ಯಾಗೆಂದರೆ, ಆನೆ, ಕುದರೆ, ಆಕಳು, ಎತ್ತು, ಬಂಡಿ, ರಥ, ಪಾಲಕ್ಕಿ, ಡೋಲಿ, ಇವುಗಳನ್ನು ಮನೆಗೆ ತರಬಹುದು, ಹತ್ತಲೂ ಬಹುದು, ಪ್ರಯಾಣ ಮಾಡಿದರೂ ಲೇಸು, ಗ್ರಾಮಕ್ಕೆ ಪ್ರವೇಶಿ

ಸಬಹುದು, ಗೃಹಪ್ರವೇಶ, ರೋಗಕ್ಕೆ ಚಿಕಿತ್ಸೆ, ಮದ್ದು ಮಾಡೋಣ , ಮಂತ್ರೋಪದೇಶ , ಜಪಾರಂಭ , ದೀಕ್ಷೆ, ವ್ರತಾರಂಭ , ಮನೆ ಕಟ್ಟುವದಕ್ಕೆ ಆರಂಭ , ಮಹಡೀ ಕಟ್ಟಿಸೋಣ , ಕೂಪಪ್ರತಿಷ್ಠೆ , ಕೆರೆಕಟ್ಟಿಸುವಿಕೆ, ದೂರಪ್ರಯಾಣ , ಯುದ್ಧಕ್ಕೆ ಹೊರಡುವಿಕೆ , ಪಟ್ಟಾಭಿಷೇಕ, ಯಜ್ಞಸಂಕಲ್ಪ , ಚೌಲ, ಕೇಶಖಂಡನ, ಮುಂಜಿ, ವಾಸ್ತುಶಾಂತಿ , ಸ್ತ್ರೀಸಂಭೋಗ , ನಾಮಕರಣ, ಅನ್ನಪ್ರಾಶನ, ಅಕ್ಷರಾಭ್ಯಾಸ, ವಿದ್ಯಾರಂಭ , ಅಭ್ಯಂಜನ, ನೂತನ ವಸ್ತ್ರಾಭರಣಧಾರಣ, ಚಿತ್ರಬರಿಯೋಣ , ಬಿರುದು ಪಹಿಸೋಣ, ನೆಲವನ್ನ ಗೇಯ್ಯುವಿಕೆ, ಧಾನ್ಯವನ್ನು ಬಿತ್ತೋಣ , ತೆಂಗಿನ ಸೊಸೀ ಹಾಕಿಸುವಿಕೆ, ಕ್ಷೌರ , ಈ ಮುಂತಾದ ಶುಭಕಾರ್ಯಗಳನ್ನು ಮಾಡಬಹುದು, ಹಾನಿಯಿಲ್ಲವು. ಚೂ। ಚೆ। ಚೊ। ಲ। ಈ ೪ ಅಕ್ಷರಗಳು ಮೊದಲಾಗಿವುಳ್ಳ ಹೆಸರುಗಳವರಿಗೆ ನಾಮ ನಕ್ಷತ್ರವಾಗಿರುತ್ತದೆ. ಉದಾಹರಣ—ಚೂಡಯ್ಯ। ಚೆನ್ನಂಣ। ಚೊಕ್ಕಂಣ। ಲಕ್ಷ್ಮಯ್ಯ। ಚೌಡಪ್ಪ। ಇತ್ಯಾದಿ। ಚೂ ೧। ಚೆ ೨। ಚೊ ೩। ಲ ೪। ಪಾದಗಳು। ಈ ನಕ್ಷತ್ರವು ಕುದುರೆಯ ಮೋರೆಯ ಹಾಗೆ ಮೂರು ಚುಕ್ಕೆಗಳಾಗಿರುವದು. ಕಪ್ಪು ಬಂಣ, ದೇವಗಣ, ವೈಶ್ಯಕುಲ, ಕ್ಷತ್ರಿಯ ಬೀಜ, ನಾಲ್ಕು ಕಾಲುಳ್ಳಪಶು, ಪಹರು, ಗಾಳಿ, ಹುಲ್ಲು, ಹುರಳಿ, ಮುಷ್ಟಿಗಿಡು ಇವುಗಳಿಗೆ ಸಂಬಂಧಿಸುತ್ತದೆ. ಈ ನಕ್ಷತ್ರದಲ್ಲಿ ೪೨ ಘುಳಿಗೇ ಮೇಲೆ ೪೭ ಘುಳಿಗೇ ವಳಗಾಗಿ ಆರಂಭಿಸಿದ ಅಥವಾ ನೆರವೇರಿಸಿದ ಕೆಲಸಗಳಲ್ಲಿ ಬಹಳ ಮೇಲುಂಟು, ೫೦ ಘುಳಿಗೇ ಮೇಲೆ ೫೪ ರ ಒಳಗೆ ಆರಂಭಿಸಿದ ಅಥವಾ ನೆರವೇರಿಸಿದ ಕೆಲಸಗಳಲ್ಲಿ ಕೇಡುಂಟು , ಯಾವ ಕಡೆಗಾದರೂ ಪ್ರಯಾಣ ಮಾಡ ಬಹುದು , ಹೊರಡುವದಕ್ಕಿಂತಲೂ ಮುಂಚೆ ಉದ್ದು ಕಾಳಿನ ಆಹಾರ ತಿಂದಿದ್ದರೆ ಜಯ, ಅಶ್ವಿನೀ ನಕ್ಷತ್ರದಲ್ಲಿ ಗಂಡು ಹುಟ್ಟಿದರೆ ೯ ದಿನಗಳು ಅನಿಷ್ಟಕಳೆಯ ಬೇಕು , ಹೆಂಣುಹುಟ್ಟಿದರೆ ದೋಷವಿಲ್ಲ, ರೋಗ ತಗಲಿದರೆ ೯ ದಿನಗಳ ಮೇಲೆ ವಾಸಿಯಾದೀತು , ರೋಗಾದಿ ಶಾಂತಿಗೆ ಚಿನ್ನದಲ್ಲಿ ಎರಡು ಗಂಡು ಪ್ರತಿಮೆಗಳನ್ನು ಒಂದೇ ರೇಕಿನಲ್ಲಿ ೨ ಕೈಗಳು ೧ ರಲ್ಲಿ ಕಮಂಡಲ, ಮತ್ತೊಂದಕ್ಕೈಲಿ ಅಮೃತ ಕಲಶ ಇರುವಂತೆ ಕೆತ್ತಿಸಿ ಕಲಶವನ್ನೂ ಬಿಳೀ ವಸ್ತ್ರಗಳನ್ನೂ ಇಟ್ಟು ಹುರಳಿರಾಶಿಯಲ್ಲಿ ಪೂಜಿಸಿಹಾಲೂ ಅನ್ನ ನೈವೇದ್ಯವಿಟ್ಟು (ದೇವಸ್ಯತ್ವಾ - ಭ್ಯಾಂ) ಎಂಬುವ ಯಜುರ್ವೇದ ಮಂತ್ರವನ್ನು ೧೨೦೦ ಸ್ಥಲ ಜಪಮಾಡಿ ಹೋಮವಾದ ಬಳಿ

ಕ ಮಧ್ಯಾಹ್ನದೊಳಗಾಗಿ ನೈಋತ್ಯ ಮೂಲೆಗೆ ಉದ್ದಿನ ಪುಡಿ ಅನ್ನ ಬಲೀ ಕೊಟ್ಟು ಹಿಟ್ಟಿನ ಕುದುರೆಯನ್ನೂ ಕಲಶವಸ್ತ್ರ ಪ್ರತಿಮೆಗಳನ್ನೂ ಬ್ರಾಹ್ಮಣರಿಗೆ ದಾನ ಕೊಟ್ಟು, ಋತ್ವಿಕ್ಕುಗಳಿಗೂ ಪುರೋಹಿತರಿಗೂ ದಕ್ಷಿಣೆ ಕೊಟ್ಟು, ಇಬ್ಬರು ಬ್ರಾಹ್ಮಣರಿಗೆ ಮೃಷ್ಟಾನ್ನ ದಕ್ಷಿಣೆಗಳಿಂದ ಸಂತರ್ಪಣೆ ಮಾಡಿದರೆ ಅಶ್ವಿನೀ ದೋಷ ಪರಿಹಾರ, ಮಹಾಶಾಂತಿ ಮಾಡಬೇಕಾದರೆ ನಕ್ಷತ್ರೇಷ್ಟಿ, ಶಾಂತಿಕಲ್ಪ, ಮುಂತಾದವುಗಳಲ್ಲಿ ಹೇಳಿ ಇರುವ ಪ್ರಕಾರ ನಡಸ ಬೇಕು, ಪ್ರತ್ಯಕ್ಷವಾಗಿ ಅಶ್ವದಾನ ೧೨೦ ಜನರಿಗೆ ಸಂತರ್ಪಣೇ ಮಾಡತಕ್ಕದ್ದು ॥ ಅಶ್ವದಾನ ಮಾಡುವಾಗ ಕರೀ ಕುದುರೆಯನ್ನು ಬಲಕಿವೀ ಹಿಡಿದು ಕೊಡ ಬೇಕು. ... ... *

ಅಶ್ವಿನೀ ನಕ್ಷತ್ರದಲ್ಲಿ ರೋಗ ತ್ತಗ್ಗಿಲಿದವರಿಗೆ ತೆಲುಗಿನವರು ( ವೆರ್ರಿಪುಚ್ಚಕಾಯ ) ತುರುಕರು (ಇಂದ್ರಾವರ್ಣಕಾಫಲ್ ) ಸಂಸ್ಕೃತದಲ್ಲಿ ( ಕಳಿಂಗಶ್ಚೇಂದ್ರವಾರುಣಃ) ಇಂಗ್ಲೀಷಿನಲ್ಲಿ ( ಕಾಲೊಸಿಂತ್ ) ಎಂದು ಕರೆಯಲ್ಪಡುವ ಹಾವುಮೆಕ್ಕೇಕಾಯಿಯ ಹಾಗಿರುವ ಕಾಯಿಗಳೊಳಗಿನ ಮೇಣದಲ್ಲಿ ಇಂಗ್ಲೀಷ್‌ನವರು (ಕ್ಯಾಲೋಮಲ್ ) ಎಂದು ಕರೆಯುವ ರಸ ಭಸ್ಮವನ್ನು ಹೊತ್ತಿಗೆ ೧- ೨- ೩ ಭತ್ತದ ಕಾಳುತೂಕದೊಳಗಾಗಿ ಸೇರ ಬಹುದಾಗುವ ಮಟ್ಟಿಗೂ ಬೆರಸಿ ಉದ್ದಿನ ಕಾಳುಗಾತ್ರ ಮಾತ್ರೇ ಮಾಡಿ ನೀರ ಜೊತೇಲಿ ನುಂಗಿ ಬಿಡುವದು. ಇದನ್ನು ಇಂಗ್ಲೀಷಿನವರು ನೈಟಪಿಲ್ಸ್ ಎನ್ನುವರು ರಾತ್ರಿ ಮಲಗುವಾಗ ತಕ್ಕೊಂಡರೆ ಬೆಳಗಾಗುವಾಗ್ಯೆ ಹೊಟ್ಟೆಯೊಳಗಣ ಪಿತ್ತವು ಪಿತ್ತ ಚೀಲದಲ್ಲಿ ಪಕ್ವವಾಗಿ ಅರಿಸಿನದ ಬಂಣದ ಹಾಗೆ ೧ ಸಲ ಭೇದಿ ಆಗುತ್ತೆ, ಪಿತ್ತದೋಷ ವಿಸರ್ಜನವಹುದು ಇದೇ ಬೇಕಾದರೆ ೨ - ೩ ಸಲ ಭೇದಿ ಆಗುವಹಾಗೆ ಬಳ್ಳೇ ಭೇದಿ ಮದ್ದನ್ನೂ ಬೆಳಿಗ್ಯೆ ತಕ್ಕೊಂಡು ಆದಿನ ಪಥ್ಯವಾಗಿರ ಬೇಕು , ತ್ರಿದೋಷಶಾಂತಿ- ಮೋಹವಾಯು, ಪಿತ್ತಗುಲ್ಮ. ಶೂಲೆ, ಜ್ವರ, ತಲೆನೋವು, ಉಷ್ಣವಾಯು, ಹೊಟ್ಟೆ. ಉಬ್ಬರ, ಇತ್ಯಾದಿ ರೋಗಗಳು ಪರಿಹರ, (ಅಶ್ವಗಂಧಿ) ಅಂದರೆ, ಹಿರೇ ಮದ್ದಿನಗಡ್ಡೆ ಇದನ್ನು ತೆಲುಗರು ಪೇರುಲೇನಿ ರೋಗಾನಿಕಿ ಪೆನ್ನೇರುಗಡ್ಡ ಅನ್ನುವರು, ಅಶ್ವಗಂಧಿ ಚೂರ್ಣ , ರಸಾಯನ ಇತ್ಯಾದಿ ಮದ್ದುಗಳನ್ನು ಮಾಡಿಕೊಟ್ಟರೆ ಅಂತರ್ಜ್ವರ, ರಕ್ತಕ್ಷಯ ಇತ್ಯಾದಿ ರೋಗಗಳು ಪರಿಹರವಹವು. ಸೊಗದೇ ಬೇರಿನ ಕಷಾಯ ಹಾಲು ಸಕ್ಕರೆ ಸಹ ಕುಡಿಯುತ್ತಾ ಬಾದರೆ, ಸಾಧಾ

ರಣವಾಗಿ ಮೋಚಕ್ಷಯ, ಬಾಲಕ್ಷಯ ಸಹ ಪರಿಹರ. ವಿಷಮುಷ್ಟಿ ಕೊರಡೂ ಸಾಸುವೇ ಸಹ ಗಂಧತೆಯಿಂದು ಬೊಳಿಯುತ್ತಾ ಬಂದರೆ ಚರ್ಮರೋಗಗಳಂದರೆ, ಜಜ್ಜುವಾಯು, ದದ್ದು, ಗಜಿ ದರ್ದುರ, ಮರದೊಗಲು, ತುರಿಖಜ್ಜಿ, ಮುಂತಾದ್ದು ಗುಣವಹವು. ಹುಳಕಗಿಲಿ ಇದ್ದರೂ, ವಿಷಸೋಕಿ ಇದ್ದರೂ ನಸರು, ಸೊನೆ, ಅಂಟು ರೋಗಗಳಿದ್ದರೂ. ತಿಶ್ನದಲ್ಲಿ ನಪ್ರುಂಸಕತ್ವವಿದ್ದರೂ ವಾಸಿಯಾಗುತ್ತೆ, ಮುಷ್ಟಿ ಮೋಣವನ್ನು ಸಾಸುವೇ ಕಾಳಷ್ಟು ಹೊಟ್ಟೆ ಯೊಳಕ್ಕೆ ಕೊಟ್ಟು ಸ್ವಾದು ಮಧುರಾಹಾರಪಥ್ಯವಿಟ್ಟರೆ ಕಾಮವೃಧ್ಧಿ, ವೀರ್ಯಸ್ತಂಭನಹುದು, ಕುದುರೇ ಗೊರಿಸೆ ಸೊಪ್ಪಿನ ರಸವನ್ನು ವಳ್ಳೆಂಣೆ ಗಂಜಳದೊಂದಿಗೆ ಕುದಿಸಿ ಕರ್ಪೂರ ಹಾಕಿ ತೊಡೆಯುತ್ತಾ ಹೊಟ್ಟೆಗೆ ಹೊತ್ತಿಗೆ ಹಣತೂಕ ತಾಮ್ರ ಭಸ್ಮವನ್ನು ಆಕಳ ತುಪ್ಪದೊಳು ಕೊಡುತ್ತಾ ತುಪ್ಪದನ್ನವಂ ಪಥ್ಯವಿರಿಸಿ ಗೋಮೂತ್ರ ಸ್ನಾನಮಾಡಿಸುತ್ತಾ ಬಂದರೆ ಮಂಡಲದೊಳಗಾಗೀ ಕುಷ್ಠರೋಗ ಪರಿಹಾರ. ಮಸಾಲೇತಿನ್ನುವ ಕುದುರೆ ಲದ್ದೀ ರಸತಕ್ಕೊಂಡು ಅದರಲ್ಲಿ ಮದ್ದು ಮಾಡಿ ಕೊಟ್ಟರೆ ಸನ್ನಿಪಾತ ಪರಿಹಾರ. ಕುದುರೇ ಲದ್ದಿ ಶಾಕಮೀಯ್ಯಲು ಶೀತವಾತ ಛಳುಕು ನಿಲ್ಲುವದು. ಹುರುಳೀ ಕಟ್ಟಿನ ಸಾರುಪಥ್ಯ ವಿಟ್ಟರೆ ಶೀತವಾತ ಕೆಮ್ಮಲು ಕಾಮಾಲೆ ಸಹಬಗೆ ಹರದೀತು. ಮತ್ತು ಹಿಂಗು ಹುರಿದು ಅರಳ ಮಾಡಿ ಪುಡಿಗೈದು ತುಪ್ಪದಲ್ಲಿ ಸೇವಿಸಲು ಶೀತವಾತ ಶೂಲೆಗಳೂ, ಹೃದ್ರೋಗಗಳೂ ಪರಿಹರವಹವು. ಬೆಂಣೆ ಅನುಪಾನವಿಡಲು ಪಿತ್ತಶಾಂತಿ. ತೆಲುಗರು (ಕಂದ) ಎಂಬ ಸೂರಣದಗಡ್ಡೆಯ ಪುಡಿಯಂ ಬೆಂಣೆಯೊಳ್ ಸವಿಯೆ ಮೂಲರೋಗದ ಮಳೆಗಳು ಹೋಗುತ್ತವೆ ವ್ರಣಗಳಿಗೆ ಅಶ್ವಿನೀ ನಕ್ಷತ್ರದಲ್ಲಿ ಶಸ್ತ್ರಿ ಚಿಕಿತ್ಸೆ ಅಂದರೆ, ಸರ್ಜರೀ ಮಾಡಿಸಿಕೊಂಡರೆ ೧೧ ದಿನಕ್ಕೆ ಆರೋಗ್ಯವಾಗುತ್ತೆ. ಭೃಂಗಾಮಲಕ ತೈಲವು ಶಿರೋನೇತ್ರ ರೋಗಹರ, ಬಂಣದ ನೀಲೀರ ರಸದಿಂದ ಕಂಣಿನ ಪಟಲಗಳು ಕತ್ತರಿಸಿ ಹೋಗುತ್ತವೆ, ಕಾಚೀರಸದಿಂದ ಇರುಳು ಕಂಗಾಣದ ಕುರುಡಕೇಸ ಕಳೆಯಲಕ್ಕುಂ. *

ಬಿಳೀಕೊಮ್ಮೇ ಬೇರು, ಅಳಲೇಕಾಯಿ, ಅರಿಸಿನ, ಪಟಿಕಿ, ಬಿಳಿಗಾರ ಕಾಚಿ, ತೊಂಡೆ, ಹೊನಗೊನೆ, ಸುರಸುರಿಕೆ, ನಂದಿವರ್ಧನ, ಎಳ್ಳು, ನುಗ್ಗೆ, ಪುಣುಗು, ಪಚ್ಚೆ ಕರ್ಪೂರ, ಕಿಲುಬು, ಹುಳಿ, ಬೆಂಣೆ ಈ ಜಿನಸುಗಳಿಂದ ಕ್ರಮಪ್ರಕಾರ ಮಾಡಲ್ಪಟ್ಟ ಕಾಡಿಗೆಯೂ ಅಂಜನಗಳೂ ಲೇಪಗ

ಳೂ ನೇತ್ರರೋಗಂಗಳಂ ಗೆಲ್ಲುತ್ತವೆ. ಅಶ್ವಿನೀನಕ್ಷತ್ರದಲ್ಲಿ ಈ ಮದ್ದುಗಳಿಗೆ ಜಿಯಯೋಗವೇ ಆದಾಗ್ಯೂ ವಿವರಣವೆಲ್ಲ ಚನ್ನಾಗಿ ಬಲ್ಲ ಅನುಭವಶಾಲಿಗಳಾದ ವೈದ್ಯರೇ ಚಿಕಿತ್ಸೆ ಮಾಡದಿದ್ದರೆ ವಿಪರ್ಯಾಸಕ್ಕೆ ಬಂದೀತು, ಯಾವದನ್ನಾತಿಳಿಯದವರು ಮಾಡಬಾರದು, ಸಿದ್ಧರಸವನ್ನು ಸಾಧಿಸಿದರೆ ೪೯ ದಿನಗಳಲ್ಲಿ ಫಲಿಸೀತು ಗಂಧಕಕ್ಕೆ ೧೮೨ದಿನ,ತಾಳಕಕ್ಕೆ ೩೬೫ದಿನ,ಅಶ್ವಿನಿಯಲ್ಲಿ ವಿಷಪಾಷಾಣ ಮುಂತಾದವುಗಳನ್ನು ತಕ್ಕಂತೆ ಕ್ರಮವಾಗಿ ಶುದ್ಧಿಮಾಡಿದರೆ ಅಮೃತವಾಗುವವು, ಅಶ್ವಿನೀ ಹಗಲು ನವಲೋಹಗಳ ಭಸ್ಮಗಳನ್ನು ಮಾಡಲಿಕ್ಕೂ ಮೈಗೆ ಕೊಡಬೇಕೂ ಲೇಸು , ಕುಪ್ಪಿಗೇ ಮಾತ್ರೆಗಳನ್ನು ಮಾಡಲು ಅಶ್ವಿನೀರಾತ್ರಿ ಲೇಸು, ಅಶ್ವಿನೀ ಬೆಳಗ್ಯೇ ಇದ್ದಾಗ ಚಿಕಿತ್ಸೆಗೆ ಆರಂಭಿಸಬೇಕು. ವಿದ್ಯೆ ಕಲಿಯತೊಡಗಿದರೆ ತಿಳುವಳಿಕೆ ಹೆಚ್ಚುವದು, ಗರಡೀ ಸಾಧನೆ ಮಾಡಿದರೆ ಮೈಘಟ್ಟಿ, ಸಂಗೀತ ಕಲಿತರೆ ಸ್ವರ ಕೆಡುತ್ತೆ, ಗರ್ಭಾಧಾನವಾದರೆ ಚೊಚ್ಚಲು ಬಸುರು ಫಲಿಸದು, ನಿಕ್ಷೇಪವನ್ನು ಕಿತ್ತರೆ ರೋಗ ತಗುಲುತ್ತೆ, ನಿಧಿಕಾಣುವ ಅಂಜನದ ಮೂಲಿಕೆತಂದರೆ ಸಿದ್ಧಿಸುತ್ತೆ , ಮಂತ್ರಜಪಕ್ಕೆ ವಿಘ್ನವಿಲ್ಲ , ಕದ್ದರೆ ಕಳ್ಳನು ಶಿಕ್ಕಿ ಹೋಗುತ್ತಾನೆ , ವಡವೆ ಹೋದರೂ ನಷ್ಟ ಪ್ರಶ್ನೆ ಮಾಡಿದರೂ ೩ ದಿನಕ್ಕೆ ಶಿಕ್ಕೀತು , ಮನೆ ಕಟ್ಟಿದರೆ ಬೇಗ ಪೂರೈಸುತ್ತೆ ರೋಗೋಪದ್ರವಗಳೂ ಇಲ್ಲ, ಆದರೆ ಮರಳಿ ಕೀಳಿಸಿಕೊಳ್ಳುತ್ತೆ- ಬೀಳುತ್ತೆ, ಶಿಲ್ಪಕ್ಕೆ ಉಪಹತಿ ಇಲ್ಲ-ಭಾವಿತೋಡಿದರೆ ಕೆಲವುಕಾಲದಮೇಲೆ ನೀರು ಶೋಷಿಸುತ್ತೆ, ರಸವಾದ ಮಾಡತೊಡಗಿದರೆ (ವಾದಭ್ರಷ್ಟೋವೈದ್ಯಶ್ರೇಷ್ಠಃ)ಎಂಬಗಾದೆಗೆ ಸರಿಯಾದೀತು. ಬಸುರಿಗೆ ಹೆರಿಗೆನೋವು ಬಂದರೆ ಬೇಗನೆ ವೊಗುವಂಪಡದು ಸುಖವಾದೀತು.ಆಕಳು,ಎತ್ತು,ಎಮ್ಮೆ ಇತ್ಯಾದಿ ಪಶುಗಳನ್ನು ತಕ್ಕೊಂಡರೆ ಹಾನಿ ಇಲ್ಲ, ಬಾಡಿಗೆಬಂಡೀ ಇಟ್ಟರೆ ಕೂಡಿಬಂದೀತು, ವರ್ತಕತನಕ್ಕೆ ಆರಂಬಿಸಲು ಜೀವನಕ್ಕೆ ತಕ್ಕಷ್ಟೇಲಾಭವುಂಟು, ಕಲಹಿಸಿದರೂ ವಾದಿಸಿದರೂ ರಾಜೀಆಗುವದು, ಕುದುರೆಯಂಕೊಂಡರೆಭಾಗ್ಯ , ಹೆಂಗಸನ್ನು ಕೂಡಿಕೊಂಡರೆ ರೋಗ , ರತ್ನವನ್ನು ಕೊಂಡರೆ ಸಾವಕಾಶದಿಂ ಲಾಭ, ಧಾನ್ಯವಂ ಮಾರಿದರೆ ಆಗಲೇಲಾಭ, ಬಿತ್ತಿದರೆ ಕರುಟು ಬೆಳೆಯುಹುದು, ಹೊಸಬಟ್ಟೆಕೊಂಡರೆ ಪುನಶ್ಚ ಹೊಸಬಟ್ಟೆ ಸಾವಕಾಶವಾಗಿ ಬರುತ್ತೆ,ಕ್ಷೌರದಿಂದ ಅಪಮೃತ್ಯು ತೊಲಗುವದು, ನೀರೆರಕೊಂಡರೆ ಬಲಹೆಚ್ಚು , ದೂರದೇಶಕ್ಕೆ ಹೊರಟರೆ ಭೋಗಬಂದಾನು , ಸಂತಾನಪ್ರಶ್ನೆ ಸಾವಕಾಶ, ಮರಣ ಸಂಶಯತೋರಿದರೆ ಆಗ ಮರಣವಿಲ್ಲ, ಸರಕಾರದತೊಂ

ದರೆ ಬರುವ ಹಾಗಿದ್ದರೆ ತಪ್ಪಿ ಹೋಗುತ್ತೆ,ತಪ್ಪು ಮಾಡಿದರೆ ಬೇಡೀ ಬೀಳುತ್ತೆ ಆತುರ ಸನ್ಯಾಸ ತಕ್ಕೊಂಡರೆ ಸಕಾಲದಲ್ಲಿ ಸಿದ್ಧಿಹೊಂದುವನು,ಸಾಲಮಾಡಿದರೆ ತೀರೀತು, ಪಿಶಾಚಹಿಡಿದರೆ ಬಿಟ್ಟುಹೋಗುತ್ತೆ, ದೆವ್ವ ಬಿಡಿಸ ತೊಡಗಿದರೆ ಗೆದ್ದಾನು, ಕೊಲಿಮಿ ಇಟ್ಟರೂ ಇಟ್ಟಿಕೆಗೂಡು, ಸುಂಣದಗೂಡು, ಮಡಿಕೆಗಳ ಆವೆ, ಇದ್ದಲುಸುಟ್ಟರೂ, ಬಾಣದ ಮದ್ದು,ಹೊಡೆದರೂ, ಭಯವಿಲ್ಲ, ಚಿಪ್ಪಿಗೆತನಕ್ಕೂ,ಹಡಪದ ಕಸಬಿಗೂ,ಆರಂಭಿಸಬಹುದು, ಗೆಜ್ಜೆಪೂಜೆ ಒಳ್ಳೇದಲ್ಲ, ದೇವಪ್ರತಿಮೆ ಕೊಂಡರೆ ಜನವಿರೋಧ ಬಂದೀತು , ಮೋಹರುಂಗುರ ವಿಟ್ಟುಕೊಂಡರೆ ಅಧಿಕಾರಭಂಗ, ಸ್ನೇಹ ಬೆಳಸಿದರೆ ಪ್ರಯೋಜನ. ಹೂತಿಟ್ಟರೆ ಮರಳಿಸಿಕ್ಕುವದು ಕಷ್ಟಮಾಡಿದ ಪ್ರತಿಜ್ಞೆಯೂ,ವಾಗ್ದಾನವೂ,ಕರಾರೂ ನೆರವೇರುವದು,ವ್ರತಕ್ಕೆ ವಿಘ್ನವಿಲ್ಲ,ತೋಟಮಾಡಿದರೆ ಹೆರವರಿಗೆ ಆಗುತ್ತೆ, ಕಶೀಮಾಡಿದರೆ ಫಲ ಉಂಟು, ಬಂಡೆವಡದರೆ ರಕ್ತಕಂಡಾನು, ಹುಡುಕಿದರೆ ಸಿಕ್ಕುತ್ತೆ,ಯಂತ್ರವನ್ನು ಧರಿಸಿದರೆ ಅನಿಷ್ಟ ಕಳದು ಹೋದೀತು. ಅಶ್ವಿನೀನಕ್ಷತ್ರದಲ್ಲಿ ಚಂದ್ರನಿರುವಾಗ ಆದಿವಾರ ಕೂಡಿದರೆ ನಂದಯೋಗಶುಭ,ಅಮಾವಾಸ್ಯೆಯೂ ಕೂಡಿದರೆ ಅಗ್ನಿಯೋಗವು ಅನಿಷ್ಟನಿವೃತ್ತಿಗೆ ಬಹಳಲೇಸು,ಸಪ್ತಮಿ ಒಳ್ಳೇದಲ್ಲ,ಸೋಮವಾರ ಶುಭ,ಮಂಗಳವಾರ ಅಮೃತಸಿದ್ಧಿ, ಅದಕ್ಕೆ ಸಪ್ತಮಿಸೇರಿದರೆ ಕೇಡು, ಬುಧಮೃತ್ಯು,ಗುರುಶೂಲ,ಶುಕ್ರಶುಭ, ಶನಿಬಲವಿಲ್ಲ, ಅಂಗಾರಕನು ಹುಬ್ಬೆಯಲ್ಲಿರುವಾಗ ಅಶ್ವಿನಿಗೆ ಚಂದ್ರಬಂದರೆ ಮಹಾಶೂಲಕ್ರೂರ,ಈ ಯೋಗಗಳ ಹೆಸರುಗಳಿಗೆ ತಕ್ಕಫಲವಾಗುವದು , ಅಶ್ವಿನೀನಕ್ಷತ್ರದಲ್ಲಿ ಮಧ್ಯಾಹ್ನದೊಳಗೆ ಕೆಂಪು ಮೋಡ ಕಂಡರೆ ಮಳೆಬಂದೀತು,ಚೈತ್ರಮಾಸದಲ್ಲಿ ಅಶ್ವಿನೀ ಶೂನ್ಯನಕ್ಷತ್ರ,ಉತ್ಪಾತಕಂಡರೆ ಗಾಳಿಹೆಚ್ಚು,ಪಾಡ್ಯವೂ ಸಂಕ್ರಮಣವೂ ಅಶ್ವಿನಿಯಲ್ಲಿ ಕೂಡಿದರೆ ಧಾರಣೆಸಮ,ಋತುಮತಿಯಾದರೆ ಮಕ್ಕಳು ಮುತ್ತೈದೆತನವೂ ಉಂಟು. ಅಶ್ವಿನಿಯಲ್ಲಿ ಹೆಂಣು ಅವ್ವಳಿಮಕ್ಕಳು ಹುಟ್ಟಿದರೆ ತಾಯಿಗೆಕ್ರೂರ, ಗಂಡುಅವಳಿ ಹುಟ್ಟಿದರೆ ತಂದೆಗೆಕ್ರೂರ, ೧ ಹೆಂಣೂ೧ ಗಂಡೂಜನಿಸದರೆ ಯಾವದಕ್ಕಾದರೂ ೧ಕ್ಕೆ ಹಾನಿ,ಅಶ್ವಿನೀನಕ್ಷತ್ರೆ ಜಾತಕನಿಗೆ ತೋಳುನೀಳ, ಕಂಣು ಅಗಲ, ದರಬಾರಿಗೆ ತಕ್ಕವನಾದನು, ಮಾತುಒಳ್ಳೇದು, ಚೆಲುವಿಕೆವುಂಟು, ಥೋಡೆವ್ಯಭಿಚಾರಿ, ವಿದ್ಯೆಉಂಟು , ಮಾನವೂ ಗೌರವವೂಸರಿಯೇ , ಅಂತಶ್ಶುದ್ಧಿಸಾಲದು, ರಹಸ್ಯವಾದ ಕಳವು, ಸಟೆನುಡಿಯುವಿಕೆ ಹೆರವರ ಕೆಲಸ, ತಾಬೇದಾರೀ, ಪಾಲುಬದುಕು, ಷಿಕ್ಮೀಹಕ್ಕು , ಈ ಗುಣಗಳು ಅನುಸರಿಸಿ ಇರುತ್ತವೆ,

ಆರೋಗದೃಢಗಾತ್ರ, ವೈದ್ಯ ಸ್ವಲ್ಪ ತಿಳಿದಿರುತ್ತೆ,ಬಡಾಯಿಗಾರ, ೧ನೇಪಾದಕ್ಕೆ ಕಳವು, ಸಾಹಸಗಾರ, ಲೋಭಿ,೨ನೇ ಪಾದದಲ್ಲಿ ಹುಟ್ಟಿದವನು ಭೋಜನಪ್ರಿಯ, ವರ್ಚಸ್ಸುಉಂಟು, ಧಾರಾಳಿ, ೩ನೇ ಪಾದಕ್ಕೆವಿದ್ಯೆ, ಬಡತನ, ಸೌಖ್ಯವೂ ವುಂಟು, ೪ನೇ ಪಾದಕ್ಕೆ ಧನವಂತ, ಧರ್ಮಕರ್ತ, ಸ್ತ್ರೀಲೋಲ, ಜನನಕಾಲದಲ್ಲಿ ಅಶ್ವಿನೀ ಆದ್ಯಂತಕ್ಕೆ ೭ ವರುಷ ಕೇತುದಶೆ,ಅದರಲ್ಲಿ ಬಾಕೀ ಇರುವ ಘುಳಿಗೆಗಳಿಗೆ ತಕ್ಕ ಡಾವಾಷಾ ಪ್ರಕಾರ ತ್ರೈರಾಶಿಕರೀತ್ಯಾ ೭ವರುಷದ ಪೈಕೀ ಜನ್ಮಾದಿ ಕೇತುದಶೆ,ಆಮೇಲೆ ಶುಕ್ರದಶೆ,೨೦। ಸೂರ್ಯ ೬। ಚಂದ್ರ ೧೦। ಕುಜ ೭। ರಾಹು ೧೮। ಈಮೇರೆ ದಶಾಕ್ರಮವು. ಅಮಾವಾಸ್ಯೆ ಅಶ್ವಿನೀನಕ್ಷತ್ರದಲ್ಲಿ ಹುಟ್ಟಿ ಬದುಕುವ ಗಂಡು ಸರಕಾರದಲ್ಲಿ ಭಾರೀ ಅಧಿಕಾರಿ , ಹೆಂಣಾದರೆ ಆಫಲ ಅವಳ ಗಂಡನಿಗೆ ಆಗುತ್ತೆ, ಸ್ತ್ರೀಪುಂಜಾತಕಗಳಲ್ಲಿ ಫಲವಿರೋಧವಿದ್ದರೆ ಮದುವೆಯಿಂದ ಈಫಲ ತಪ್ಪಿ ಹೋಗುವದುಂಟು,ಈ ರಾಜಯೋಗ ಬಂದರೆ ಕೆಲವು ವರುಷಗಳಿಗೆ ಭಗ್ನವಾಗಿ ಹೋದೀತು, ಗುರುಚಂದ್ರಯೋಗವಿದ್ದರೆ ಸರಕಾರದ ನೌಕರಿಯಿಂದಲೇ ಜೀವನ, ಶುಕ್ರಕುಜರು ಕೂಡಿ ಇದ್ದರೆವಿಧುರತ್ವ ಬಂದು ಎರಡನೇ ಮದುವೆಯಾಗುತ್ತಾನೆ, ಹೆಂಣಾಗಿದ್ದರೆ ಮುಂಡೆಯಾಗಿ ಹಾದರಗಿತ್ತಿಯಹಳು,ಅಥವಾ ಬೇರೆ ಮದುವೆಯನ್ನೋ ಕೂಡಿಕೆಯನ್ನೋ ಮಾಡಿಕೊಂಡಾಳು, ಬುಧಶುಕ್ರರು ಸೇರಿ ಇದ್ದರೆ ಭೋಗಕ್ಕಾಗಿ ಸಾಲವಾದೀತು,ಗುರುಶನಿಗಳೊಂದು ಕಡೆ ಕೂಡಿದರೆ ರಾಜರ್ಷಿಗೆ ಸಮಾನರವಿ ಶನಿ ಸೇರಲು ಜನವಿರೋಧವಾಗಿ ಧನಕಾಡುತ್ತೆ,ಕುಜಬುಧರಾಹು ಸೇರಿದರೆ ರೋಗಪೀಡೆ, ಶುಕ್ರರವಿರಾಹು ಶೇರಲ್ಕೆ ಮನೇಲಿ ಕಂಟಬ್ಯಾನೆ ಚಂದ್ರಗ್ರಹಣ ತೋಗಿಲಿದರೆ ಅಂಗವೈಕಲ್ಯ, ಮೇಷದಲ್ಲಿ ಚಂದ್ರನೂ ಸಿಹ್ಮದಲ್ಲಿ ಅಂಗಾರಕನೂ ಇದ್ದರೆ ಪುತ್ರದುಃಖ, ಸರ್ಪದ್ರೇಕ್ಕಾಣದಲ್ಲಿ ಕುಜನಿದ್ದರೆ ಸರ್ಪಗಂಡ, ಗುರುದೃಷ್ಟಿ ಆ ಕುಜಗೂ ಚಂದ್ರನಿಗೂ ಇದ್ದರೆ ಸರ್ಪಗಂಡ ಪರಿಹಾರ, ಶುಕ್ರದಶೆ ಕ್ರೂರ, ಅವನೊಡನೆ ರಾಹು ಬೆರತಿದ್ದರೆ ರಾಹುವೇ ಮಾರಕ, ಗುರು ಕುಜ ಚಂದ್ರರವಿಗಳಿಂದ ದೀರ್ಘಾಯುರಾರೋಗ್ಯವಿದ್ದರೆ ಶನಿಮಾರಕನಾಗುತ್ತಾನೆ, ಪುಣ್ಯವಶದಿಂದ ಅದು ತಪ್ಪಿದರೆ ಬುಧ ಕೇತು ಸಂಧಿಮೃತ್ಯು, ಮಹಾ ಪುಣ್ಯಕೈಗೂಡಿಪಾಪವಿಲ್ಲದಿರುವಿಕೆ, ಮಹದನುಗ್ರಹ, ದೈವವರಲಾಭ, ರಸಸಿದ್ಧಿ , ಯೋಗಸಿದ್ಧಿ, ಮಹಾ ಮಂತ್ರಸಿದ್ಧಿ , ಕಲ್ಪಸಾಧನ , ಇತ್ಯಾದಿಗಳಿದ್ದರೆ ಕಾಲಮೃತ್ಯುವನ್ನಾ ಮುಂದಕ್ಕೆ ತಳ್ಳಿಕೊಂಡು ಬೇಕಾದಷ್ಟು ವರುಷ ಬದುಕ ಬಹುದು. ಅಶ್ವಿನೀ ನ

ಕ್ಷತ್ರದ ಆದಿಭಾಗದೊಳಗೆ ೨ ಘಳಿಗೆ ಅಭುಕ್ತಾಶ್ವಿನೀ, ಆದರಲ್ಲಿ ಹುಟ್ಟಿ ಬದುಕಿದರೆ ಅನಾಮಧೇಯನಾಗಿ ಬಿದ್ದಿರುತ್ತಾನೆ. ಶನಿ ಚಂದ್ರರು ಕೂಡಿ ಇದ್ದರೆ ಬಾಲಾರಿಷ್ಟ, ೧ನೇ ವರುಷದಲ್ಲಿ ಹೋಗುವಿಗೆ ಚುಟಿಕೇ ಬೀಳುತ್ತೆ, ೨ಜ್ವರ,೩ ಹೊಟ್ಟೆರೋಗ, ೪ ಅಥವಾ ೫ ರಲ್ಲಿ ಕಂಣಾನೋವು,೬-೭ ಧನಹಾನಿ, ೧೦-೨೦ ಅಪಮೃತ್ಯು, ೨೪ ಮೃಗಭಯ,೪೦ ರೋಗ, ೬೪ ಮಹಾರೋಗ, ಗಂಡಗಳು ಕಳೆದುಳದರೆ ೯೬ ವರುಷ ಆಯುಷ್ಯ , ಇದು ಸಾಧಕದಿಂದ ಹೆಚ್ಚಲೂ ಬಹುದು, ಬಾಧಕದಿಂದ ತಗ್ಗಲೂಬಹುದು, ಕಾಲವು ಕರ್ಮಾಯತ್ತವೆಂದು ಸಿದ್ಧಾಂತ. ಅಶ್ವಿನೀ ನಕ್ಷತ್ರದವನಿಗೆ ಗೋಚಾರರೀತ್ಯಾ೩-೬-೧೦-೧೧ಈ ರಾಶಿಗಳಿಗೆ ರವಿ-ಕುಜ- ಶನಿ-ರಾಹು-ಕೇತುಗಳು ಬಂದಾಗಲೆಲ್ಲ ಮೇಲು, ೨-೫-೭-೯-೧೧ ರಲ್ಲಿ ಗುರು-ಬುಧ-ಶುಕ್ರ-ಚಂದ್ರರು ಶುಭಕರರಹರು, ೧೨-೧-೨ರಲ್ಲಿ ಶನಿ ಏಳ್ಳಾಟಕಾಟ ೪-೫ರಲ್ಲಿ ಪಂಚಮಶನಿ, ೮ರಲ್ಲಿ ಅಷ್ಟಮಶನಿ ಕ್ರೂರನು, ಎರಡನೇ ಸಲದೆ ಎಳ್ಳಾಟ ಮಹಾಕ್ರೂರ , ಜನ್ಮಕಾಲದಲ್ಲಿ ಶನಿ ವೃಷಭದಲ್ಲಿದ್ದರೆ ಅಶ್ವಿನೀನಕ್ಷತ್ರದವನಿಗೆ ಶನಿಕಾಟವೇನೂ ಇಲ್ಲ , ಉಂಟಾದರೆ ಮರಣಾವೇಸರಿ. ಅಶ್ವಿನಿಯಲ್ಲಿ ಹೆಣಹೊರಟರೆ ಯಾವವಾರವೇ ಆಗಿದ್ದರೂ ಇನ್ನೇನೂ ಹಾನಿಯಿಲ್ಲ. ಅಶ್ವಿನೀ ನಕ್ಷತ್ರದಲ್ಲಿ ದೈವಬಲ, ಗುರುಸೆವೆ, ಸತ್ಕರ್ಮ, ಧರ್ಮ, ಗೋಪ್ರಾಪ್ತಿ , ದೇವರು ದೊರೆಯೋಣ ಘಟಿಸಿದರೆ ಭಾಗ್ಯಾಭಿವೃದ್ಧಿ, ಶ್ರೇಯಸ್ಸು. ಈ ಮೇರೆ ಪ್ರಕೃತೋಚಿತಾಶ್ವಿನೀಫಲ ಹೇಳಲ್ಪಟ್ಟಿದೆ.

---

## —*( ಭ ರ ಣೀ ನ ಕ್ಷ ತ್ರ ಕ್ಕೆ.)*—

ಶ್ಲೋಕ । ಯುದ್ಧಾಭಿಘಾತವಧಬಂಧವಿಷಾಗ್ನಿಶಸ್ತ್ರ। ಭೇದಾಪವಾದಭಯಸಾಹಸಶೌರ್ಯಕರ್ಮ। ದ್ಯೂತಾಭಿಚಾರಪರುಷಾನೃತಚೌರ್ಯಜಾಲ। ಕರ್ಮಾನಿಸಿದ್ಧಿಮುಪಯಾಂತಿಯಮಸ್ಯಭೇತು। ಲೀಲಾಲೋಲೋಭರಣೀ। ತ್ರಿಕೋಣ ರೂಪಾತ್ರಿಕಾರಕಾಕರಿಣೀ । ತಿರ್ಯಗಧೋಮುಖ್ಯಬಲಾ। ಮನುಷ್ಯಗಣಜಾರ್ಥತಾರಕಾವಿಪುಲಾ। ನಕ್ಷತ್ರಂಯಮದೈವತ್ಯಮುಗ್ರಂ ಗ್ರಾಮಾಗ್ನಿಶಸ್ತ್ರವತ್। ಜಾತೋದುಮೋದನಶ್ಚತ್ರತದ್ಗುಣಾಃಪರಿಗಣ್ಯತೆ। ಯುಧಿಷ್ಠಿರಶ್ಚ ತತ್ರೈವಜಜ್ಞೇಯತ್ರ ಸುಧಾಘಟೀ । ವೃಕ್ಷಸ್ತ್ವಾಮಲಕಃಕಾಕಃಪಕ್ಷೀಪಿತೃವನಸ್ಥಿತಃ। ಉಕಾರಃಪಿಂಡಭೋಜೀಚ । ಕಲಿರಾಡ್ಬಲಗರ್ವಿತಃ। ಖಾಶೀಚಮಹಿಷಾರಸಾಢೊ ಭೀಷಣೋನೀಲಕಂಬಳಃ। ವಿಷಂವೀರಂಮೈನಸ್ವತ

ಕ್ಷೇ ತತ್ರಜಾತೋದುಷ್ಟಃ। ಹವಿರಮೃತಂಧರ್ಮರಾಜರ್ಕ್ಷೇ। ತತ್ರಜಾತಶ್ಶಿಷ್ಟಃ। ಮಧ್ಯಲೋಚನಂ। ಚಂಡಾಲಜಾತಿಃ। ದಿನತ್ರಯಂ। ಮಧ್ಯನಾಡೀ। ಜಾನುರಜ್ಜುಃ। ಮೇಷರಾಶಿಃ। ಕುಜಃ ಆಲಸ್ಯಂ। ಮರಣವಾರ್ತಾ। ಶಿವಶ್ಶಿವಾನಾಮಶಿವೋಶಿವಾನಾಮಿತಿಸ್ಮಶಾನರುದ್ರಸಹಿತ ಪ್ರೇತರಾಜಸ್ಯಧರ್ಮರಾಜರೂಪಂ। ವಿಷಘುಟಿಕಾಃವೀರಂ ೨೪। ಅಮೃತಘುಟಿಕಾಃಹವಿಃ ೪೮ (ಅಮೃತೇವಿದುರೋಜಾತೋ ವಿಷೇತುಕಣಿಕೋಜನಿ) ಆದಾವಘುಕ್ತಘುಟಿಕಾಸ್ಸಪ್ತ। ಆವಶ್ಯಕಪ್ರಯಾಣೇಪೂರ್ವದಿಗುತ್ತರದಿಕ್ಛಶಸ್ಯತೇ। ತಿಲತಂಡುಲಭಕ್ಷಣೇ ಕ್ಷೇಮಃ। ಜ್ವರೇಪ್ರಾಣಭಯಂ। ಏಕಾದಶದಿನಾರಿಷ್ಟಂ। ಕೃಷ್ಣವರ್ಣಾಂಯಮಾಯಸೀಂದ್ವಿಭುಜಾಂ ಪಾಶದಂಡಧಾರಿಣೀಂ ಮಹಿಷಾರೂಢಾಂ ನೀಲಾಂಬರಾಂತಿಲಾಕ್ಷತಾಂ ಗುಡಾನ್ನಪ್ರಿಯಾಂಯಮಪ್ರತಿಮಾಮರ್ಚಯೇತ್। ಯಮಾಯಸೋಮಂಗಂಸುಸುತ—ಕೃಧಃಇತಿಮಂತ್ರಃ। ಅಷ್ಟೋತ್ತರಶತಹೋಮಃ। ಗ್ರಾಮಸ್ಯದಕ್ಷಿಣಾಯಾಂರಾತ್ರೌಬಲಿಂಹರೇತ್। ಸಹಸ್ರಂಜಪಃ। ಗಜದಾನಂ। ಮಹಿಷದಾನಂವಾ। ಅಷ್ಟೌಬ್ರಾಹ್ಮಣಾನ್ಗ್ರಾಹಯೇತ್। ಯಹಾಶಾಂತೌಮಹಾಕ್ರಮಃ। ದಂತಿಬೀಜಾನಿವಿರೇಚನೇಶಸ್ತಾನಿ। ಏಕಾದಶಾತ್ಸುಖೀಭವತಿ। ಕಷ್ಟಸಾಧ್ಯಾಭೀಷ್ಟಸಿದ್ಧಿಃ। ಆದಿವಾರೇರಂಧ್ರಯೋಗಃ। ಸೋಮೇಗಂಡಯೋಗಃ। ಕುಜೇಕರ್ಮಯೋಗಃ। ಬುಧೇನಾಶಯೋಗಃ। ಗುರೌಮೃತ್ಯುರೋಗಃ। ಶುಕ್ರೇಶೂಲಯೋಗಃ। ಅನೋರಾಧಾಯಾಂಕ್ರೂರಗ್ರಹಸ್ಥಿತೌಮಹಾಶೂಲಯೋಗಃ। ಶನೌಪೀಡಾಯೋಗಃ। ಯೋಗನಾಮಾನುರೂಪಂಫಲಂ। ಫಲ್ಗುನೇಶೂನ್ಯಂ। ಗೋಚಾರೋತ್ಪಿನೀವತ್। ಕುಜರ್ಕ್ಷಾದಿಚಂದ್ರಗರ್ಭ ಚಕ್ರಶೂಲಸ್ಥಿತಭರಣ್ಯಾಂರೋಗನಾಶಃ ಉತ್ಪಾತದರ್ಶನೇಶೀತಜ್ವರದುರ್ಭಿಕ್ಷಾದಿಪೀಡಾ। ಸಂಕ್ರಮಣೇಮಧ್ಯಾರ್ಘಃ। ಕನ್ಯಾಗತೇರವೌಪ್ರೇತವೃದ್ಧಿಃ। ಪ್ರಥಮರಜಸ್ವಲಾಪತಿಪುತ್ರವರ್ಜಿತಾಭವೇತ್। ಶಾಂತಿಕರ್ಮಣಾಕ್ಷಮಃ। ಮಾಸಷಟ್ಕಸಂಭೋಗಂವರ್ಜಯೇತ್। ವರ್ಷೇಧಾನ್ಯವೃದ್ಧಿಃ। ಪುಣ್ಯಾಚರಣೇಪಾಪಕ್ಷಯಃ। ಜ್ಯೇಷ್ಠಾಯಾಂರವಿಃ- ರವತ್ಯಾಂಕುಜಃ - ಶತತಾರಕಾಯಾಂಗುರುಃ - ಶ್ರವಣೇಶನಿಃ - ಪುಷ್ಯಮಘ್ಯಾಂ ಬುಧಃ - ಮಖಾಯಾಂರಾಹುಃ- ಆರ್ದ್ರಾಯಾಂಶುಕ್ರಃ - ಧನಿಷ್ಠಾಯಾಂಪೂರ್ಣಚಂದ್ರಃ ಭರಣೀನಕ್ಷತ್ರಸ್ಯಲತ್ತಾಪ್ರದಾಃ। ಭರಣ್ಯಾಂಮರಣೇವತ್ಸರಾತ್ಪ್ರಾಣ್ಯಂತರಮರಣಂ। ಭರಣ್ಯಾಂಜಾತಶ್ಚಂಚಲಃ। ಶೌಚಾಚಾರವರ್ಜಿತಃ। ಮೋಹೋಷ್ಣಶರೀರಃ। ಪಂಡಿತಪುತ್ರಃ। ಸ್ವೈರಾಚಾರಿ। ಧೀರ್ಘಾಯುಃ। ಸತ್ಯವಾದೀ। ಭೋಗೀ। ಸ್ತ್ರೀಪ್ರಿಯಃ। ವಿ

ಕ್ರೂರಕರ್ಮಾ। ಗರ್ವಿತಃ। ನಿದ್ರಾಳುಃ ದಾತಾ। ಅಸಹಾಯಶಾಲೀ। ಉಪಕಾರೀ। ರಕ್ತಾಕ್ಷಃ। ವಕ್ರಕೇಶಃ। ನಾಭಿಸಮೀಪೇಸೂಕ್ಷ್ಮಮತ್ಸ್ಯರೇಖಾ। ಊರುಪೀಡಾ। ಪ್ರಥಮಪಾದೇ-ರವಿಃ- ರಾಜಾಂಶಃ- ಗುಣವಾನ್- ಧೀರಃ। ದ್ವಿತೀಯಪಾದೇ - ಬುಧಃ- ನಪುಂಸಕತುಲ್ಯಃ- ಲುಬ್ಧಃ- ಮಾಯಾವೀ- ಮೃತ್ಯುಪೀಡಿತಃ । ತೃತೀಯಪಾದೆ- ಶುಕ್ರಃ- ನಿರ್ಭಯಃ- ಬಹುಲೋಮಾ । ಉತ್ಸಾಹೀ- ಶೂರಃ। ಚತುರ್ಥಪಾದೆ- ಕುಜಃ- ದರಿದ್ರಃ- ಕ್ರೂರಃ- ಕಟುಭಾಷೀ- ಕ್ಲೇಶಸಹಃ- ಬಹುಪ್ರಜಃ-ಫಲಕಾಲಪರಿತ್ಯಾಗೀ। ಆದೌಶುಕ್ರದಶಾವಿಂಶತಿವಾರ್ಷಿಕೀ! ಪ್ರಥಮೆಮಾಸೇ-ಚತುರ್ಥೇವತ್ಸರೇ-ಅಪಮೃತ್ಯುಃ। ಏಕಾದಶೇದ್ವಾದಶೇವಾಬ್ದೇ ಅಗ್ನಿಭಯಂ। ವಿಂಶತ್ಯಬ್ದೇಮೇಹರೋಗಃ। ಸಪ್ತವಿಂಶತ್ಯಬ್ದೇಶತ್ರುಭಯಂ। ಸಪ್ತತ್ರಿಂಶತಿವತ್ಸರೇಜ್ವರಾದಿರೋಗಾಃ। ಪಂಚಾಶದ್ವರ್ಷೇಅಪಮೃತ್ಯುಃ। ಸಪ್ತತಿವರ್ಷೆಶತ್ರುಭಯಂ। ಅಥವಾಗುಲ್ಮವ್ರಣರೋಗಾಃ। ಷಟ್ಸಪ್ತತಿವತ್ಸರೇಮೃಗಭಯಂ। ಅಸತಿಬಾಧಕೇ ನವತಿವರ್ಷಾಣಿ ಪರಮಾಯುರನುಕ್ತಮನ್ಯತೋ ಗ್ರಾಹ್ಯಮಿತಿಭರಣೀ ವಿಚಾರಃ ॥

ತಾತ್ಪರ್ಯ। ಭರಣೀನಕ್ಷತ್ರವು ಆಕಾಶದೊಳಗೆ ಎಲ್ಲಾಗ್ರಹಮಂಡಲಗಳಿಗಿಂತಲೂ ಮೇಲೆ ಮೇರುವನ್ನು ಪ್ರದಕ್ಷಿಣವಾಗಿ ಸುತ್ತುತ್ತಿರುವ ನಕ್ಷತ್ರಮಂಡಲದಲ್ಲಿ ಅಸ್ವಿನೀನಕ್ಷತ್ರಕ್ಕೆ ಪೂರ್ವಭಾಗದೊಳು ತ್ರಿಕೋಣಾಕಾರವಾಗಿ ೩ ನಕ್ಷತ್ರಗಳಾಗಿ ಕಾಣಿಸುವದು. ಲೀ-೧ನೇ ಪಾದ. ಲೂ ೨ನೇ ಪಾದ। ಲೇ-೩ನೇ ಪಾದ। ಲೋ-೪ನೇ ಪಾದ। ಈ ನಕ್ಷತ್ರಕ್ಕೆ ಯಮಧರ್ಮರಾಯನೇ ದೇವತೆ। ಆನೆ। ತಿರ್ಯಕ್ಮುಖ। ಕೆಳಗಿನದೃಷ್ಟಿ। ಹೆಣ್ಣು। ಮನುಷ್ಯಗಣ। ಅರ್ಧಬಲ। ಮಧ್ಯಲೋಚನ। ಆಲಸ್ಯ। ಉಗ್ರಸ್ವಭಾವ। ಗ್ರಾಮಾಗ್ನಿ ಶಸ್ತ್ರಾಧಿಕಾರ । ನೆಲ್ಲೀಮರ । ಸ್ಮಶಾನಸ್ಥಳ। ಕಾಗಿ ಹಕ್ಕಿ। ಉಕಾರ। ಬಲಗರ್ವ । ಪಾಪ। ಕಲಿ। ಕಲಹ ದುಃಖ । ಕೋಣ । ಎಮ್ಮೆ । ಕರೀಕಂಬಳಿ । ಉರಲುಹಗ್ಗ । ಸೌವೀರವಿಷ । ೨೪ ಘಳಿಗೆಯಿಂದ ೨೮ ರವರಿಗೆ ವಿಷಘಳಿಗೆ ೪। ಆಗ ಹುಟ್ಟಿದವನು ದುರ್ಯೋಧನ ಅಂಥಾ ದುಷ್ಟರೇ ಹುಟ್ಟಿ ಪ್ರಬಲವಾಗಿದ್ದು ಕುಲಕ್ಷಯ ಮಾಡಿಕ್ಕೊಂಡು ಹೋಗುತ್ತಾರೆ। ೪೮ರಿಂದ ೫೨ ರವರಿಗೆ ೪ ಘಳಿಗೆಅಮೃತಕಾಲ। ಆಗ ಹುಟ್ಟಿದವರು ವಿದುರನೂ, ಧರ್ಮರಾಯನೂ ಅಂಥಾ ಒಳ್ಳೆಯವರೆ ಅವತರಿಸಿ ನೀತಿಧರ್ಮಪರರಾಗಿ ಯೋಗ್ಯರೆನ್ನಿಸಿಕೊಳ್ಳುತ್ತಾರೆ। ಇದು ಮಧ್ಯನಾಡೀ ನಕ್ಷತ್ರಜಾನುರಜ್ಜು। ಇದರಲ್ಲಿ ಹುಟ್ಟಿದವರಿಗೆ ಮೃಗಶಿರೆ। ಪುಷ್ಯಮಿ। ಹುಬ್ಬೆ। ಚಿತ್ತೆ। ಅನೂರಾಧೆ। ಪೂರ್ವಾಷಾಢೆ। ಧನಿಷ್ಠೆ। ಉತ್ತರಾಭಾದ್ರೆ। ಈ ೮ ನಕ್ಷತ್ರಗಳ

ವರನ ಕೂಡೆ ಮದುವೆಗೆ ಘಟಿತಾರ್ಥ ಮಧ್ಯೈಕ ನಾಡೀ ಆಗುವದರಿಂದ ವೈಧವ್ಯ ದೋಷವು। ಆದಿಭಾಗದಲ್ಲಿ ೭ ಘುಳಿಗೆ ಅಭುಕ್ತಭರಣೀ ದೋಷ, ಆಗ ಹುಟ್ಟಿದವರು ನೀಚರಾಗಿ ಇರುತ್ತಾರೆ, ಮಿಕ್ಕ ನಕ್ಷತ್ರಘುಳಿಗೆಗಳಲ್ಲಿ ಹುಟ್ಟಿದವರು ಸುಗುಣದುರ್ಗುಣಾಗಳು ಮಿಶ್ರವಾಗಿ ಕೆಟ್ಟವರಿಗೆ ಕೆಟ್ಟವರಾಗಿಯೂ, ಸತ್ಪುರುಷರಿಗೆ ಸತ್ಪುರುಷರಾಗಿಯೂ ಕಲಿಕಾಲಕ್ಕೆ ತಕ್ಕವರಾಗಿರುತ್ತಾರೆ, ಇದರಲ್ಲಿ ಮರಣವಾರ್ತೆ ಬಂದರೆ ತಪ್ಪುವದಿಲ್ಲ, ಪ್ರಶ್ನೆ ಕೇಳಿದರೆ ಆಲಸ್ಯ, ಕಷ್ಟಸಾಧು, ರೋಗಕಾಗಿಲಿದರೆ ೧೧ ದಿನ ಕ್ರೂರ ಮಹಾಗಂಡ, ಜಾಪಾಳದ ಬೀಜದಮದ್ದು ಭೇದಿಗೆ ಪಂಟೀತು, ನೆಲ್ಲೀಕಾಯಿ ಪಿತ್ತಹರವಾದೀತು, ಎಮ್ಮೇ ಮೊಸರೂ,ಹಾಲಿನಗಿಂಣಾ ವಿರೋಧಿಸೀತು, ಮಳೆ ಬಂದರೆ ಬಳೆ ಹೆಚ್ಚು, ಪ್ರಯಾಣ ಮಾಡಿದರೆ ಕಷ್ಟ, ಕ್ಷೌರ ಮಾಡಿಸಿಕೊಂಡರೆ ತಲೆ ನೊಂದೀತು, ಮೈಥುನದಿಂದ ಮೋಹಕಾರಕ ಹಿಡದೀತು, ಹೆಂಣು ನೆರದರೆ ಮಕ್ಕಳಿಗೂ ಗಂಡನಿಗೂ ಹಾನಿಯಾದ್ದರಿಂದ ೬ ತಿಂಗಳವರಿಗೂ ಶೋಭನ ಪ್ರಸ್ತ ಮಾಡಬಾರದು, ಉತ್ಪಾತ ಹುಟ್ಟಿದರೆ ರೋಗಗಳೂ ಬರವೂ ಬಂದೀತು, ಯಾವ ಶುಭಕಾರ್ಯಕ್ಕೂ ಈ ನಕ್ಷತ್ರ ಯೋಗ್ಯವಲ್ಲವು, ಅವಶ್ಯವಾಗಿ ಹೊರಡಬೇಕಾದರೆ ಮುಡಲಿಗೂ, ಬಡಗಲಿಗೂ, ತಿಲಾನ್ನವನ್ನುಂಡುಪ್ರಯಾಣ ಮಾಡಬಹುದು, ಈ ನಕ್ಷತ್ರದಲ್ಲಿ ಜಗಳ, ಹೊಡಿಯುವಿಕೆ, ಕೊಲ್ಲುವಿಕೆ, ಕಟ್ಟುವಿಕೆ. ವಿಷಪ್ರಯೋಗ, ಅಗ್ನಿಪ್ರಯೋಗ. ಆಯುಧಪ್ರಯೋಗ, ಮಿತ್ರಭೇದ, ಅಪದೂರು ಹೊರಿಸೋಣ, ಹೆದರಿಸೋಣ, ವ್ಯಭಿಚಾರ, ಜುಲುಂ, ಜೂಜು, ಮೋಟದ ಶೂನ್ಯ ಮಂತ್ರತಂತ್ರ ಪಂಪ್ರುಲು, ಮದ್ದೀಬಿಡುವಿಕೆ, ಶಾಪಕೊಡುವಿಕೆ, ಸುಳ್ಳು,ಅಪಸಾಕ್ಷಿ, ಕಳವು, ಇಂದ್ರಜಾಲ, ಭಾರಣಿ ಹಕ್ಕಿಬಿಕ್ಕಿವಿದ್ಯೆ, ಪಿತೃಕರ್ಮ, ಶ್ರಾದ್ಧ, ಇಂಥಾ ಕೆಟ್ಟದುಷ್ಟ ಕೆಲಸಗಳು ನಡದಾವು. ಈ ನಕ್ಷತ್ರದೋಷಕ್ಕೆ ಶಾಂತಿ ಮಾಡಬೇಕಾದರೆ ಕಪ್ಪಿನ ಲೋಹದಲ್ಲಿ ೨ ಕೈ, ೨ ಕಾಲು, ೧ ತಲೆ, ಪಾಶದಂಡಾಯುಧಗಳನ್ನು ಧರಿಸಿದ ಯಮಪ್ರತಿಮೆಯನ್ನು ಮಹಿಷ ವಾಹನವಾಗಿ ಎಳ್ಳಿನಿಂದಲೂ ಕರೀ ಹೂವುಗಳಿಂದಲೂ ಆರಾಧಿಸಿ ಬೆಲ್ಲದ ಅನ್ನವನ್ನು ಊರಿಗೆ ಟೆಂಕಲಲ್ಲಿ ರಾತ್ರಿಯೊಳು ಬಲಿಹಾಕಬೇಕು. (ಯಮಾಯಸೋಮಂ) ಎಂಬುವ ಯಜುರ್ವೇದ ಮಂತ್ರವನ್ನು ೧ ಸಾವಿರ ಜಪ ಮಾಡಿಸಿ ಹೋಮ ಮಾಡಿಸಿ ಗಜದಾನವಾಗಲೀ ಮಹಿಷದಾನವಾಗಲೀ, ಕರೀ ಶಹಲು, ಕರೀ ಕಂಬಳಿ ಇತ್ಯಾದಿಗಳನ್ನು ದಾನಕೊಟ್ಟು ೮-೧೦೮-೧೧೨೮ ಬ್ರಾಹ್ಮಣ ಭೋಜನ ಮಾಡಿಸ

ಬೇಕು. ಮುಹೂರ್ತಂಗಳೂ, ಗೋಚಾರ ಫಲಗಳೂ, ಜಾತಕ ಭಾವ ಫಲಗಳೂ ಸುಮಾರು ಅಶ್ವಿನೀ ನಕ್ಷತ್ರವನ್ನೇ ಹೋಲುವವು, ಚಂದ್ರಗರ್ಭ ಚಕ್ರದಲ್ಲಿ ಭರಣಿಯು ಶೂಲದಲ್ಲಿ ಹತ್ತಿದಾಗ ಚಂದ್ರನು ಭರಣಿಗೆ ಬಂದ ಕಾಲದೊಳು ಭರಣೀ ನಕ್ಷತ್ರದವರಿಗೆ ಜ್ವರಾದಿ ಮಹಾ ರೋಗ ತಗಲಿದರೆ ಆಗಂಡ ತಪ್ಪುವದು ಕಷ್ಟ, ಜ್ಯೇಷ್ಠೆಯಲ್ಲಿ ಸೂರ್ಯನೂ- ರೇವತಿಯೊಳು ಕುಜನೂ- ಶತಭಿಷೆಯಲ್ಲಿ ಗುರುವೂ- ಶ್ರವಣದಲ್ಲಿ ಶನಿಯೂ- ಪುಷ್ಯಮಿಯೊಳು ಬುಧನೂ ಮಖೆಯಲ್ಲಿ ರಾಹುವೂ - ಆರ್ದ್ರೆಯಲ್ಲಿ ಶುಕ್ರನೂ - ಧನಿಷ್ಠೆಯಲ್ಲಿ ಪೂರ್ಣಚಂದ್ರನು ಸಂಚರಿಸುವ ಕಾಲಗಳೊಳಗೆ ಆಯಾಗ್ರಹಗಳು ಭರಣೀನಕ್ಷತ್ರದವರಿಗೆ ಲತ್ತೆಯೆಂಬ ಕಾಟಕೊಡುತ್ತಾರೆ, ಈನಕ್ಷತ್ರವು ಫಾಲ್ಗುಣಮಾಸದಲ್ಲಿ ಶೂನ್ಯವಾಗುತ್ತೆ, ಯೋಗಕೂಡಿದರೆ ಹೆಸರಿಗೆ ತಕ್ಕಫಲವಾದೀತು. ಭರಣೀನಕ್ಷತ್ರದಲ್ಲಿ ಮನೆಯಿಂದ ಹೆಣಾ ಹೊರಟರೆ ೧ ವರುಷದೊಳಗಾಗಿ ಮತ್ತೊಂದುಹೆಣ ಹೊರಟೀತು,ಯಾವ ದೋಷವಿದ್ದರೂ ಶಾಂತಿಮಾಡಿಸಿದರೆ ಪರಿಹರವಾದೀತು.

ಭರಣೀನಕ್ಷತ್ರದಲ್ಲಿ ಚಂದ್ರನಿರುವಾಗ ಹುಟ್ಟಿದವನು- ಚಂಚಲಸ್ವಭಾವ ಆಚಾರಕಡಮೆ-ಮೋಹಕಾರಕ-ಶತ್ರುವೃದ್ಧಿ-ಆಯುಷ್ಯವೃದ್ಧಿ ದಿಟವನ್ನು ಹೇಳಿಬಿಡುತ್ತಾನೆ-ಗುಟ್ಟುನಿಲ್ಲುವದಿಲ್ಲ- ಅಹಂಕಾರಿ-ತಿಳಿದವನ ಮಗನಾಗಿರವನು-ಕಷ್ಟಸುಖಗಳನ್ನು ಹೇರಳವಾಗಿ ಅನುಭವಿಸಾನು-ಕಾಮಿ-ದಾತ- ಆಲಸ್ಯ-ಧ್ಯಾನಸಗಾರ-ಆತುರಗಾರ-ಮರತು ಹೋಗುತ್ತಾನೆ-ಹೊಟ್ಟೆಗುಚ್ಚು ಗೊಳ್ಳುತ್ತಾನೆ- ಹೆರವರಿಗೆ ಉಪಕಾರಿ-ಜಿದ್ದುಖೋರ- ಕಣ್ಣುಕೆಂಪು-ಗುಂಗುರುಕೂದಲು- ಹೊಕ್ಕಳ ಬಳಿಯೊಳು ಮತ್ಸ್ಯರೇಖೆ ಸೂಕ್ಷ್ಮರೇಖೆ-ತೊಡೆಗಳಿಗೆತೊಂದರೆ-ಈ ಫಲಗಳನ್ನು ಛಾಯಾಮಾತ್ರವಾಗಿ ಅನುಭವಿಸುತ್ತಾನೆ. ೧ನೇಪಾದಕ್ಕೆ ಸೂರ್ಯ-ರಾಜಾಂಶ-ಗುಣವಂತೆ, ೨ನೇ ಪಾದಕ್ಕೆ ಬುಧ- ಷಂಡಾಂಶಲೋಭಿ- ಮೋಸಗಾರ, ೩ ನೇ ಪಾದಕ್ಕೆ ಶುಕ್ರ- ವಿಜಯಾಂಶ-ಶೂರ- ಉತ್ಸಾಹಗಾರನಾದಾನು- ಹೆದರುವನಲ್ಲ-ಕಾದಲುಹೆಚ್ಚು, ೪ನೇ ಪಾದಕ್ಕೆ ಕುಜ- ದರಿದ್ರಾಂಶೆ- ಮಾತು ಕ್ರೂರ- ಮಕ್ಕಳು ಹೆಚ್ಚು- ಕಷ್ಟ-ಕೆಲಸಮಾಡಿ ಫಲಕಾಲದಲ್ಲಿ ಬಿಟ್ಟು ನಿಷ್ಠೂರ ಕಟ್ಟಿಕೊಳ್ಳುತ್ತಾನೆ. ಭರಣೀನಕ್ಷತ್ರದಲ್ಲಿ ಹುಟ್ಟಿದವರಿಗೆ ಜನ್ಮಕಾಲದಲ್ಲಿ ಶುಕ್ರದಶಾ ೨೦ ವರುಷಗಳ ಪೈಕಿ ನಕ್ಷತ್ರಘುಳಿಗೆ ಬಾಕೀ ಇರುವ ದಶಮಾಷಾ ಪ್ರಕಾರ ಉಳದಿರುತ್ತೆ. ೧ನೇ ತಿಂಗಳಲ್ಲಿ ಅಪಮೃತ್ಯು, ೪ - ೧೧ - ೧೨ ರಲ್ಲಿ ಅಗ್ನಿ, ೨೦ ರೋಗ, ೨೭ ಜ್ವರ, ೫೦ ಮೃತ್ಯು, ೭೦ ಶಸ್ತ್ರ, ೭೬ ಮೃಗಭಯ, ೯೦

ಮರಣ ಈದಿನ ಈ ತಿಂಗಳು ಈವರುಷಗಳಲ್ಲಿ ಬಹುಶಕಾರ್ರ, ಈಫಲಗಳು ಸಾಧಾರಣವಾಗಿ ನಡೆಯುವವು, ಶುಭಗ್ರಹ ಬಲವಿದ್ದರೆ ತಪ್ಪಿ ಹೋಗುತ್ತವೆ, ಇಲ್ಲದಿದ್ದರೆ ಕಷ್ಟತಪ್ಪಲಾರದು. ಈನಕ್ಷತ್ರ ಬಹಳ ಕೆಟ್ಟದ್ದು ಕ್ವಚಿತ್ ಬಹಳ ಒಳ್ಳೇದಾಗುವದೂ ಉಂಟು. ಇತಿ ಭರಣೀ ನಕ್ಷತ್ರ ವಿಚಾರ ಸಮಾಪ್ತ. ।೨। ... ... *

## ಕೃತ್ತಿಕಾ ನಕ್ಷತ್ರಕ್ಕೆ ೩.

ಶ್ಲೋ । ಅಥಾನಹೋಮಮುಖಸಾಧನಯಾಜಕರ್ಮಾಹ್ವಾನಂ ವಿಧಾತ್ರುವಿಹಿತಾಭರಣಾದಿಕರ್ಮ। ಮಂತ್ರೌಷಧಿಘುನರಸಾಯನಸಾಧನಾನಿಸಿಧ್ಯಂತಿವಹ್ನಿವಿಹಿತಾನಿಹುತಾಶನರ್ಕ್ಷೇ। ಆ—ಈ—ಊ—ಏ ಕೃತ್ತಿಕಾ। ರಕ್ತವರ್ಣಾ। ಷಟ್ತಾರಕಾ। ಕ್ಷುರಾಕೃತಿಃ। ಪುರುಷಃ। ರಾಕ್ಷಸಗಣಃ। ಅಜಯೋನಿಃ। ಅಗ್ನಿರ್ದೇವತಾ ಬ್ರಾಹ್ಮಣಜಾತಿಃ। ತ್ರಿಪಾತ್। ಅಧೋಮುಖಂ। ಸುಲೋಚನಂ। ಸಾಧಾರಣಂ। ಅಂತಸ್ಸಮೀಪತಾರಾ। ಶೂನ್ಯಸ್ಥಾನಂ। ಅಗ್ನಿಮಂಡಲಂ। ಶಮೀವೃಕ್ಷಃ। ಮಯೂರಪಕ್ಷಿ। ಅಕಾರಸ್ವರಃ। ಅಸ್ಮಿನ್ ಅನಿರುದ್ಧೋಜಾತಃ। ತ್ರಿಂಶದ್ಘಟಿಕಾನಂತರಂವಿಷನಾಡ್ಯಶ್ಚತಸ್ರಃ। ಯಾತ್ರಾವರ್ಜ್ಯಂ। ವಿಂಶದ್ಘಟಿಕಾನಂತರಂದಧಿಭಕ್ತ್ವಾ ಪ್ರಾಗುದಕ್ಪ್ರಯಾಣೇಕೃತದೋಷೋನಾಸ್ತಿ। ಕೃತ್ತಿಕಾಸುಜ್ವರೋತ್ಪತ್ತೌಪಿತ್ತೋಷ್ಣಭಯಮ್ ಅನಿಷ್ಟದಿನಾನಿನವ। ತಚ್ಛಾಂತಿಸ್ತು। ಶ್ಲೋ॥ ದ್ವಿಭುಜಂರಕ್ತವರ್ಣಂಚವರಾಭಯಕರದ್ವಯಂ। ಮೇಷಾರೂಢಂಶಕ್ತಿಹಸ್ತಂ ರಕ್ತಚಂದನಧಾರಿಣಂ। ಅಗ್ನಿಮಾರಾಧಯೇತ್। ರಕ್ತಗಂಧಕರವೀರಪುಷ್ಪಘೃತಗುಗ್ಗುಲಧೂಪತೈಲದೀಪಘೃತಾನ್ನನೈವೇದ್ಯಾನಿ। ಮಂತ್ರಾಸ್ತು। ಅಗ್ನಿನಾಗ್ನಿಸ್ಸಮಿಧ್ಯತೇ— ಹವ್ಯಃ। ಇತಿವೇದಮಂತ್ರೇಣಷೋಡಶೋಪಚಾರೈಃ ಸಂಪೂಜ್ಯ ಘೃತೇನಮಧುನಾ ಅಗ್ನಿಗಾಯತ್ರ್ಯಾ ಅಷ್ಟೋತ್ತರಶತಂ ಹುತ್ವಾಗಂಧಮಾಲ್ಯೈಃ ಅಭ್ಯರ್ಚ್ಯದಧ್ಯೋದನಗುಡೋದನರಕ್ತಾನ್ನಬಲಿಂಹರೇತ್। ನವಾಹಾತ್ಸುಖೀಭವತಿ। ರಕ್ತಧೇನುಂದದ್ಯಾತ್। ಯೋಗಾಸ್ತು। ನಂದಾಯಾಂನಿರ್ಜೀವಯೋಗಃ। ಆದಿವಾರೇಧೂಮಯೋಗಃ। ಸೋಮೇನಾಶಯೋಗಃ। ಕುಜೇಯಮಕಂಟಕಯೋಗಃ। ಬುಧೇನಷ್ಟಯೋಗಃ। ಗುರೌನಾಶಯೋಗಃ। ಭೃಗೌಶೂಲಯೋಗಃ। ಶನೌಶುಭಯೋಗಃ। ಶನಿಪಂಚಮೀಕೃತ್ತಿಕಾಯೋಗೇಮರಣಯೋಗಃ। ಕಾರ್ತೀಕಮಾಸೇಶೂನ್ಯನಕ್ಷತ್ರಂ। ಕೃತ್ತಿಕಾಸ್ಥಿತೇಚಂದ್ರಮಸಿಉ

ತತ್ಪತದರ್ಶನೆದುರ್ಭಿಕ್ಷಾಗ್ನಿಜ್ವರಭಯಂ। ಕನ್ಯಾಪ್ರಥಮರಜಸ್ವಲಾಚೇತ್ ದರಿದ್ರದುಃಖಮನುಭವತಿ। ಭಾಂಡೆಷ್ಟಕಾದಿದಹನ। ಧಾತುವಾದ। ಲೋಹೊತ್ತಪನ। ಸುವರ್ಣಪುಟಪಾಕ। ರಸವಾದ। ಋಣವಿಮೋಚನ। ಆಗ್ನೇಯದ್ರವ್ಯಸಂಗ್ರಹ। ಪಶುಕ್ರೇಣ। ಕಂಟಕವೃಕ್ಷಸ್ಥಾಪನ। ಕ್ರೂರಮಂತ್ರಜಪ। ಯಜ್ಞಾದಿಕಾರ್ಯೇಷುಪ್ರಶಸ್ತಂ॥ ಕೃತ್ತಿಕಾಸುಜಾತಃ। ಮತಿವರ್ಣ। ಖ್ಯಾತಃ ಬಹ್ವಾಶೀ। ಪ್ರಮದಾಪ್ರಿಯಃರೋಪಪ್ರತಾಪವಾನ್। ಸ್ವಾರ್ಜಿತಧನಜೀವನಃ। ಸಿತಕೇಶಃ।ವಾಯುಭೀರುಃ। ತಿಲಮತ್ಸ್ಯಾಂಕಿತಃ । ಪ್ರಥಮಪಾದಸ್ಯಗುರುಃ । ಕಾರ್ಯದಕ್ಷಾಂಶಃ। ಕುಶಲಃ। ಬಂಧುಪ್ರಿಯಃ। ಪರೋಪಕಾರೀ । ತೇಜಸ್ವೀ। ದ್ವಿತೀಯಪಾದಸ್ಯ।ಶನಿಃ। ಕರ್ಮಕರ್ತಾಂಶಃ। ಸಂಸ್ಕಾರಹೀನಃ। ಪುಷ್ಟಶರೀರಃ। ಮಂದಭಾಷೀ । ತೃತೀಯಪಾದಸ್ಯಶನಿಃ। ಶೂರಾಂಶಃ। ಕ್ರೋಧವಾನ್। ವ್ಯಸನೀ। ದುರ್ಮತಿಃ। ಮಾರಕಃ। ಚತುರ್ಥಪಾದಸ್ಯಗುರುಃ। ವಿದ್ವಾಂಶಃ। ಮತಿವರ್ಣ।ತೇಜಸ್ವೀ। ಶ್ರೀಮಾನ್ ಕುಶಲಃ। ರವಿಮಹಾದಶಾಷಡ್ವತ್ಸರಾಃ। ಭುಕ್ತಿಸ್ತುತ್ರಯೋಮಾಸಾಃ।ಅಷ್ಟಾದಶದಿನಾನಿಃ ಕೃತ್ತಿಕಾಜಾತಸ್ಯಮಾಸತ್ರಯೆಜ್ವರಭಯಂ । ವರ್ಷಾಂತೆಶೀತಜ್ವರಃ। ದ್ವಿವರ್ಷಾಂತೆವಿಷಜಂತುಭಯಂ। ಪಂಚಮೆಸಪ್ತಮೆದ್ವಾದಶೆವಾಪಿತ್ತಜ್ವರಃ। ಏಕವಿಂಶತಿವತ್ಸರೆಅಪಮೃತ್ಯುಃ। ಷಷ್ಟಿವರ್ಷೆಶತ್ರುಭಯಂ। ಸಪ್ತತಿವರ್ಷೆಶಸ್ತ್ರಭಯಂ । ನೇತ್ರರೋಗಶ್ಚ । ತತ್ಪರಿಹಾರೆಕತಿ ಅಶೀತಿವರ್ಷಾಣಿಪರಮಾಯುಃ। ರುದ್ರಾಗ್ನಿಯೋಗಸಾಧನೆ ಅಮಿತಮಾಯುಃ। ಪಾಪಾಚರಣೆ ಆಯುಕ್ಷಯಃ। ಪುಣ್ಯಾಚರಣೆ ಆಯುಷ್ಯವೃದ್ಧಿಃ ಇತಿಕೃತ್ತಿಕಾವಿಚಾರಃ॥

ಟೀಕು॥ ಕ್ಷುರಾಕೃತಿಯಾಗಿ ಆರು ಚುಕ್ಕೆಗಳು ಅಂತರಿಕ್ಷದಲ್ಲಿ ಕಾಣುತ್ತವೆ ಅದು ಕೃತ್ತಿಕಾನಕ್ಷತ್ರ, ೧ನೇ ಪಾದಕ್ಕೆ ಆನಂದಯ್ಯ,೨ನೇ ಪಾದಕ್ಕೆ ಈಶ್ವರ, ೩ನೇ ಪಾದಕ್ಕೆ ಊಟದಯ್ಯ,೪ನೇ ಪಾದಕ್ಕೆ ಏಜಂಣ, ಈಮೇಲೆನಾಮನಕ್ಷತ್ರ ಶಿಳಕೋತಕ್ಕದ್ದು. ಈನಕ್ಷತ್ರದಗುಣ ಸಂಬಂಧವೇನಂದರೆ, ಕೆಂಪುಬಂಣ, ಆರುಲೆಕ್ಕ, ಗಂಡು. ಆಯುಧ, ರಾಕ್ಷಸಗುಣ, ಆಡು ಜೀವದನ, ಹಾರುವಜಾತಿ, ಮೂರುಕಾಲು, ಕೆಳಮುಖ, ವಳ್ಳೀಕಂಣು, ಸ್ಥಳಸಾಲದು, ಬನ್ನೀಗಿಡ,ಈ ನಕ್ಷತ್ರದಲ್ಲಿ ಅನಿರುದ್ಧನ ಅವತಾರವಾಯಿತು. ಈನಕ್ಷತ್ರಕ್ಕೆ ಚಂದ್ರನು ಪ್ರವೇಶಿಸಿದ ೩೦ ಘುಳಿಗೇ ಮೇಲೆ ನಾಲ್ಕುಘುಳಿಗೇ ತನಕ ವಿಷಕಾಲವು, ಪ್ರಯಾಣ ಹೊರಡಬಾರದು,ಹೊರಡ ಬೇಕಾದ ಆವಶ್ಯಕವಿದ್ದರೆ ೨೦ ಘುಳಿಗೆ ಕಳಕೊಂಡು ಮೊಸರುಂಡುಮೂಡಲಿಗೂ ಬಡಕಲಿಗೂ ಹೋಗಬಹುದು.ಈ ನಕ್ಷತ್ರ

ದಲ್ಲಿ ಹೋದವಡಿವೇಸಿಕ್ಕೋದಿಲ್ಲ. ಜ್ವರಬಂದರೆ ಉಷ್ಣಪಿತ್ತಭಯ, ಒಂಭತ್ತು ದಿನ ಗಂಡಕಾಲ, ಅಗ್ನಿಪ್ರತಿಮೆಯನ್ನು ರಕ್ತಗಂಧ ತುಪ್ಪದೋಗರಗಳಿಂದಪೂಜಿಸಿ ಮೊಸರನ್ನ ಬಲೀಕೊಟ್ಟು, ಕಂಪಾಕಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟರೆ ಗಂಡಪರಿಹಾರ. ನಂದ ತಿಥಿಯಲ್ಲಿ ಈ ನಕ್ಷತ್ರ ಶೇರಿದರೆ ನಿರ್ಜೀವ ಯೋಗ, ಆದರೆ ಹುರುಳಿಲ್ಲವೆಂದು ತಾತ್ಪರ್ಯ. ಈ ಮೇರೆ ಯೋಗಗಳ ಹೆಸರುಗಳಿಗೆ ಸರಿಯಾದ ಫಲವಾಗುವದು. ಈನಕ್ಷತ್ರದಲ್ಲಿ ಹೆಂಣು ಮೈನೆರದರೆ ದರಿದ್ರಳಾಗುವಳು, ಕುಂಬರಆವಿಗೆ, ಇಟ್ಟಿಗೆಸೂಳು, ಲೋಹಗಳನ್ನು ಕರಗುವಿಕೆ, ಸುಂಣದಗೂಡು, ಸಾಲತೀರಿಸುವಿಕೆ, ಪಶುಗಳನ್ನು ಮಾರುವಿಕೆ, ಮುಳ್ಳುಗಿಡವನ್ನು ನೆಡುವಿಕೆ, ಔಷಧಕ್ಕೆ ಪುಟಪಾಕ, ಕ್ರೂರ ಮಂತ್ರಜಪ. ಇಂಥಾ ಕೆಲಸಗಳನ್ನು ಮಾಡಬಹುದು, ೧ನೇ ಪಾದದಲ್ಲಿಹುಟ್ಟಿದವನು, ಬುದ್ಧಿವಂತ, ಹೆಸರ್ವಾಸಿ ಪಡದಾನು, ಆಹಾರಶಕ್ತಿಯೂ ಹೆಂಗಳಲ್ಲಿ ಪ್ರೀತಿಯೂ ಶೂರತ್ವವೂ ಉಂಟು. ತಾನು ಸಂಪಾದಿಸಿಕೊಂಡ ಧನದಿಂದ ಬದುಕುತ್ತಾನೆ, ನೆಂಟರಲ್ಲಿ ಪ್ರೀತಿಮಾಡುವನು. ೨ನೇ ಪಾದಕ್ಕೆ ಬಲಿಷ್ಠ, ಪುಷ್ಟಿ ಯುಂಟು, ಮಾತುನಿಧಾನ, ೩ನೇ ಪಾದಕ್ಕೆ ಶೌರ್ಯವಂತ, ಕೋಪಿಷ್ಠ, ದುರ್ಬುದ್ಧಿ, ಆಲಸ್ಯಗಾರ, ೪ನೇ ಪಾದಕ್ಕೆ ವಿದ್ಯೆ, ಬುದ್ಧಿ, ತೇಜಸ್ಸು, ಸಂಪತ್ತು, ಯುಕ್ತಿವುಂಟು. ಈ ನಕ್ಷತ್ರಕ್ಕೆ ಸೂರ್ಯದಶೆ ೬ ವರುಷ ಸೂರ್ಯಭುಕ್ತಿ ೩ತಿಂಗಳು ೧೮ದಿನ. ಈನಕ್ಷತ್ರದಲ್ಲಿ ಹುಟ್ಟಿದವನಿಗೆ ೩ನೇ ತಿಂಗಳಲ್ಲಿ ಜ್ವರ, ೧ವರುಷ ತುಂಬುವಾಗ್ಯೆ ಶೀತರೋಗ, ೨ ವರುಷ ತುಂಬುವಾಗ್ಯೆ ನಂಜು, ೫—೭—೧೨ನೇ ವರುಷದಲ್ಲಿ ಪಿತ್ತರೋಗ, ೨೧ನೇ ವರುಷದಲ್ಲಿ ಅಪಮೃತ್ಯುಗಂಡ, ೬೦ನೇ ವರುಷದಲ್ಲಿ ಹಗೆಯವರ ಭಯ, ೭೦ನೇ ವರುಷದಲ್ಲಿ ಆಯುಃಧಗಂಡ, ಕುರುಡುತನ, ಇವುಗಳು ಘುಟಿಸುವದುಂಟು, ಪುಣ್ಯವಂತನಾಗಿ ಸತ್ಕರ್ಮದಯಾದಿಗಳನ್ನು ಉಳಿಸಿಕೊಂಡರೆ ಈದೋಷಗಳಿಲ್ಲದೆ ಸಾಧಾರಣವಾಗಿ ೮೦ ವರುಷ ಬದುಕಬಹುದು, ಪಾಪಕಾರ್ಯ ಮಾಡುತ್ತಾ ಬಂದರೆ ಹೇಳಿದ ಅನಿಷ್ಟಗಳೂ ತಗುಲುತ್ತವೆ, ಆಯುಷ್ಯವೂ ಕ್ಷೀಣಿಸುವದು. ಉಷ್ಣದ್ರವ್ಯಸಾಧನದಿಂದ ಶಿವಯೋಗವನ್ನು ಅಭ್ಯಾಸಮಾಡಿದರೆ ಅಮಿತವಾಗಿ ಆಯುಷ್ಯ ಹೆಚ್ಚೀತು, ಇಂತು ಕೃತ್ತಿಕಾ ನಕ್ಷತ್ರದವಿಚಾರವು ।೩। ... *

## ರೋಹಿಣೀ ನಕ್ಷತ್ರಕ್ಕೆ ೪.

ಶ್ಲೋಕ ॥ ರಾಜಾಭಿಷೇಕಗೃಹಹರ್ಮ್ಯಪುರಪ್ರವೇಶ ಹೋಮಾದಿಶಾಂತಿಕ ವಿವಾಹವಿಧಿಂಚಕುರ್ಯಾತ್ । ಶಾಲೀಕ್ಷುವೃಕ್ಷರಸಸರ್ಷಪವಾಪನಾನಿ ದಿವ್ಯಾಂಬರಾಭರಣಭೂಷಣಮಂಬುಜಕ್ಷೇ ॥ ಒ—ವಾ—ವೀ—ವೂ ರೋಹಿಣೀ । ಕೃಷ್ಣವರ್ಣಃ । ಪಂಚತಾರಾ । ಶಕಟಾಕೃತಿಃ । ಧ್ರುವಸಂಜ್ಞ । ಮನುಷ್ಯಗಣಃ । ಯೋನಿಸ್ಸರ್ಪಜಂಗಃ । ಬ್ರಾಹ್ಮಾದೇವತಾ । ಶೂದ್ರಜಾತಿಃ । ಚತುಷ್ಪಾತ್ । ಊರ್ಧ್ವಮುಖಂ । ಅಂಧಕಲೋಚನಂ । ಸ್ಥಿರಂ । ಅಶ್ವಪರ್ಣತಾರಾ । ಸ್ಥಾನಂ ಪಟ್ಟಣಾಂ । ಇಂದ್ರಮಂಡಲಂ । ಜಂಬೂವೃಕ್ಷಃ । ಕಂಬುಪಕ್ಷೀ । ಉಕಾರ ಬುಕಾರಾಕ್ಷರಸ್ವರಃ । ಕೃಷ್ಣಭೀಮಾಜಾತಾ । ಚತುರ್ವಿಂಶದ್ಘಟಿಕೋರ್ಧ್ವಂವಿಷನಾಡ್ಯಶ್ಚತಸ್ರಃ । ಯಾತ್ರಾಯಾಂಪರವನ್ನಾನ್ನಭಕ್ಷಣಂ । ಪೂರ್ವೋತ್ತರಪ್ರಯಾಣೇಶುಭದಃ । ಜ್ವರೇಸಪ್ತದಿನಾನ್ಯರಿಷ್ಟಾನಿ । ತಚ್ಛಾಂತಿಃ । ಕೃಷ್ಣವರ್ಣಂ । ಚತುರ್ಭುಜಂ । ಅಕ್ಷಸೂತ್ರಕಮಂಡಲಧರಂ । ಹಂಸವಾಹನಂ । ಬ್ರಹ್ಮರೂಪಂ । ಕೃಷ್ಣಗಂಧಂ । ಕಮಲಪುಷ್ಪಂ । ಸರ್ಜರಸಧೂಪಃ । ಕ್ಷೀರಾನ್ನನೈವೇದ್ಯಂ । ಮಂತ್ರಸ್ತು । ನಮೋಬ್ರಹ್ಮಣೇ—ಕರೋಮಿ । ಇತಿಮಂತ್ರೇಣಷೋಡಶೋಪಚಾರೈಸ್ಸಂಪೂಜ್ಯ । ಸಹಸ್ರಪಾದಾನ್ಯೈಗಾಯತ್ರಿ ಯಷ್ಟೋತ್ತರಶತಂಹುತ್ವಾ । ಗಂಧಮಾಲ್ಯೈಶ್ಚ ಕ್ಷೀರೋದನಬಲಿಂಹರೇತ್ । ಸಪ್ತಾಹಾತ್ಸುಖೀಭವತಿ । ತಿಥಿವಾರನಕ್ಷತ್ರಯೋಗಃ । ಆದಿವಾರೇಶುಭಯೋಗಃ । ಸೋಮವಾರಸ್ಥಿರಯೋಗಃ । ಪೌರ್ಣಮಾಯಾಮಗ್ನಿಯೋಗಃ । ಕುಜೇಮಂದಯೋಗಃ । ಬುಧಾಷ್ಟಮ್ಯಾಂಮಹಾಸಿದ್ಧಯೋಗಃ । ಬುಧಷಷ್ಠ್ಯಾಂ ಬಾಣಯೋಗಃ । ಗುರೌಮೃತ್ಯುಯೋಗಃ । ಭೃಗೌಯಮಕಂಟಕಯೋಗಃ । ಶನೌ ಅಮೃತಸಿದ್ಧಯೋಗಃ । ಏಕಾದಶ್ಯಾಂವಿಷಯೋಗಃ । ನಂದಾಸುನಿರ್ಜೀವಯೋಗಃ । ದಶಮ್ಯಾಂಕ್ರೂರಯೋಗಃ । ಅಭಿಜಿನ್ನಕ್ಷತ್ರೇ ಕ್ರೂರಗ್ರಹೆ ಸ್ಥಿತಮಹಾಶೂಲಯೋಗಃ । ಚೈತ್ರಮಾಸೇಶೂನ್ಯಂ । ಅಸ್ಮಿನ್ನಕ್ಷತ್ರೇ ಉತ್ಪಾತದರ್ಶನೆ ಸುಭಿಕ್ಷೀಭವತಿ । ಪ್ರಥಮರಜಸ್ವಲಾ ಕನ್ಯಾಸೌಭಾಗ್ಯಪುತ್ರವತೀಭವತಿ । ಋತುಪುಂಸವನ । ಸೀಮಂತ । ನಾಮಕರಣ । ಅನ್ನಪ್ರಾಶನ । ಚೌಲ । ಉಪನಯನ । ವೇದಶಾಸ್ತ್ರಾಭ್ಯಾಸ । ಸಮಾವರ್ತನ । ವಿವಾಹ । ತೈಲಾಭ್ಯಂಗ ನವವಸ್ತ್ರಾಭರಣಾರಾಜ್ಯಾಭಿಷೇಕ । ಸಿಂಹಾಸನಾಂದೋಳಿಕಾರೋಹಣ । ವಾಸ್ತು । ಪುರ । ಗ್ರಾಮ । ದೇವತಾ । ಪ್ರತಿಷ್ಠಾಪ್ರವೇಶ । ಆಜ್ಞಾಧಾನಹೋ

ಮಃಶಾಂತಿಪೌಷ್ಟಿಕ। ಧನಧಾನ್ಯಸಂಗ್ರಹ । ತಟಾಕಾದಿಶುಭಕಾರ್ಯೇಷುಪ್ರಶಸ್ತಾ। ರೋಹಿಣ್ಯಾಂಜಾತಸ್ಯಗುಣಾಃ। ಸುಪಾಣಿಃ। ಸ್ಕಂಧಚಾರುಃ। ಲಲಾಟಸ್ಫುಟಿತಃ। ಸ್ವಮಾತೃಮಾತುಲಾರಿಷ್ಟಃ। ಸ್ಥಿರರಾಮಃ। ಸುತಂತ್ರಃ । ಸುತಪ್ರಿಯಃ। ನಿಪುಣಃ। ಧನಧಾನ್ಯಸಮೃದ್ಧಃ। ನವವಸ್ತ್ರಪ್ರಿಯಃ। ನೇತ್ರರೋಗೀ। ಕಿಂಚಿದ್ಭೀತಃ। ಸ್ತ್ರೀಲೋಲಃ। ಪ್ರಥಮಪಾದಸ್ಯಕುಜಃ। ತಸ್ಕರಾಂಶಃ। ರಕ್ತರೋಮಾತನುಃ। ಶೂರಃ। ನಿಷ್ಠುರಃ। ದ್ವಿತೀಯಪಾದಸ್ಯಭೃಗುಃ । ಭೋಕ್ತ್ರಂಶಃ। ದೀರ್ಘಶರೀರಃ। ಜಿತೇಂದ್ರಿಯಃ। ಸುಶೀಲಃ। ತೃತೀಯಪಾದಸ್ಯ। ಸೌಮ್ಯಃ। ಪಂಡಿತಾಂಶಃ। ಕವಿಃ। ಧೀರಃ। ಗಣಕಃ। ಚತುರ್ಥಪಾದಸ್ಯಚಂದ್ರಃ। ಧನಾಂಶಃ।ಬಂಧುಪ್ರಿಯಃ। ಪರೋಪಕಾರಿ। ಧೀಮಾನ್। ಅಸ್ಮಿನ್ನಕ್ಷತ್ರೇ ಜಾತಸ್ಯಚಂದ್ರಮಹಾದಶಾ। ದಶವರ್ಷಾಣಿ। ಅಂತರ್ದಶಾಷಣ್ಮಾಸಾಃ। ದಿವಸೇದಶಘಟಿಕಾಭ್ಯಾಂಪರಂ ಅಪಮೃತ್ಯುಃ। ದಶದಿನೇ ವರ್ಷಾಂತೇವಾಭಯಂ। ಸಮವರ್ಷೇವಾ ನೇತ್ರವ್ಯಾಧಿಃ। ಸಪ್ತವಿಂಶತಿವರ್ಷೇಅಪಮೃತ್ಯುಃ। ದ್ವಾತ್ರಿಂಶದ್ವರ್ಷೇಮಧ್ಯೇಮಹಾಭಯಂ। ದ್ವಿಪಂಚಾಶದ್ವರ್ಷೇ ಅಪಮೃತ್ಯುಃ। ದ್ವಿಚತ್ವಾರಿಂಶದ್ವರ್ಷೇನೀಚಬಾಧಾ। ತತ್ಪರಿಹರತಿ। ಅಷ್ಟಾಶೀತಿವರ್ಷಾಣಿಪರಮಾಯುಃ ॥ ಇತಿರೋಹಿಣೀ ನಕ್ಷತ್ರವಿಚಾರಸ್ಸಮಾಪ್ತಃ, ... ... *

ಟೀಕೆ। ಆಕಾಶದಲ್ಲಿ ತೇರಿನ ಹಾಗೆ ಕಾಣುವ ೫ ಚುಕ್ಕೆಗಳು ರೋಹಿಣೀ ನಕ್ಷತ್ರವೆನಿಸುವದು, ಅದು ಸರ್ಪಜಾತೀಯವು, ಬ್ರಹ್ಮದೇವರು ದೇವತೆ, ಶೂದ್ರಜಾತಿಗೆ ಅಭಿಮಾನಿ, ಜೀವದನಕ್ಕೆ ಒಳ್ಳೇದು, ಮನುಷ್ಯಗಣ, ನೇರಳೇ ವೃಕ್ಷ, ಉಕಾರಸ್ವರ, ಈ ನಕ್ಷತ್ರದಲ್ಲಿ ಶ್ರೀ ಕೃಷ್ಣನೂ ಮತ್ತು ಭೀಮನೂ ಹುಟ್ಟಿದರು. ೨೪ ಘಳಿಗೆ ಮೇಲೆ ಇದಕ್ಕೆ ವಿಷಕಾಲ ೪ ಘಳಿಗೆ ಪರಮಾನ್ನವನುಂಡು ಮೂಡಲಿಗೂ ಬಡಕಲಿಗೂ ಪ್ರಯಾಣ ಮಾಡಬಹುದು, ಇದರಲ್ಲಿ ಜ್ವರಾ ತಗಲಿದರೆ ೭ ದಿನ ಕ್ರೂರ, ಬ್ರಹ್ಮದೇವರಿಗೆ ಪ್ರೀತಿಯಾಗಿ ಶಾಂತೀ ಮಾಡಬೇಕು, ಹಾಲು ಅನ್ನ ಬಲಿ ಹಾಕಬೇಕು, ಹೆಂಣು ಮೈನೆರದರೆ ಭಾಗ್ಯವಂತಳೂ ಪುತ್ರವಂತಳೂ ಆಗುವಳೂ, ಶೋಭನ, ಶೀಮಂತ, ಅನ್ನಪ್ರಾಶನ, ಚೌಲ, ಮುಂಜಿ, ಅಕ್ಷರಾಭ್ಯಾಸ, ಮದುವೆ, ಅಭ್ಯಂಜನ, ನೂತನ, ವಸ್ತ್ರಧಾರಣ, ಪಟ್ಟಾಭಿಷೇಕ, ವಾಸ್ತುಶಾಂತಿ, ಗೃಹಪ್ರವೇಶ, ಪ್ರತಿಷ್ಟೆ ಯಜ್ಞಕ್ಕೆ ಆಧಾನ, ಬೀಜಾವಾಪ, ಮೊದಲು ಬಿತ್ತನ, ಧಾನ್ಯವನ್ನು ಕೊಂಡು ಕೊಳ್ಳುವಿಕೆ, ಬಾಗಾಯತು ಬೆಳೆ ಇಡು

ವಿಕೆ, ಕೆರೇ ಕಟ್ಟಿಸುವಿಕೆ ಮುಂತಾದ ಕೆಲಸಗಳನ್ನ ಮಾಡಬಹುದು, ಕ್ಷೌರಾದಿ ಕರ್ಮಗಳನ್ನು ಮಾಡಬಾರದು, ಇದರಲ್ಲಿಹೋದ ವಡಿವೆ ಬೇಗಸಿಕ್ಕುತ್ತೆ. ಈ ನಕ್ಷತ್ರವಲ್ಲಿ ಹುಟ್ಟಿದವರು ಸುಂದರರಾಗಿರುವರು, ಸೋದರಮಾವನಿಗೆ ಕ್ರೂರಗಂಡ, ಅದಕ್ಕೆ ಶಾಂತಿ ಮಾಡಿದರೆ ಕ್ಷೇಮವಾಗುವದು, ಜಾತಕ ಫಲಗಳು ಸ್ವತಂತ್ರ, ಮಕ್ಕಳುವಂದಿಗೆ, ಚತುರ, ಧನ ಧಾನ್ಯಸಂಪಂನ, ವಳ ಹೆದರಿಕೆಗಾರ, ೧ನೇ ಪಾದಕ್ಕೆ ಕಳವು ಮಾಡುವನು, ೨ನೇ ಪಾದಕ್ಕೆ ಭೋಜನಪ್ರಿಯ, ಜಿತೇಂದ್ರಿಯ, ಒಳ್ಳೇಸ್ವಭಾವವುಳ್ಳವನು, ೩ನೇ ಪಾದಕ್ಕೆ ವಿದ್ವಾಂಸನು, ಗಣಿತಬಲ್ಲವನು, ೪ನೇ ಪಾದಕ್ಕೆ ಧನವಂತ ನೆಂಟರಲ್ಲಿ ಪ್ರೀತಿಯುಳ್ಳವನು, ಹೆರವರಿಗೆ ಉಪಕಾರಿ, ಬುದ್ಧಿ ಮಂತ, ಈ ನಕ್ಷತ್ರಕ್ಕೆ ಚಂದ್ರಮಹಾರ್ದಶೆ ೧೦ ವರುಷಗಳು, ಚಂದ್ರಭುಕ್ತಿ ೧೦ ತಿಂಗಳು, ಹುಟ್ಟಿದ ದಿನ, ಹತ್ತನೇದಿನ. ೧೨ ನೇ ತಿಂಗಳು, ಮತ್ತು ಸರಿ ತಿಂಗಳು, ೨೭- ೩೨- ೪೨- ೫೨- ಈ ವರುಷಗಳಲ್ಲಿ ಕಷ್ಟ ಸಂಭವಿಸುವದು, ಸಾಧಾರಣವಾಗಿ ೮೮ ವರುಷಗಳ ವರಿವಿಗೂ ಬದುಕಬಹುದು. ಇಂತು ರೋಹಿಣೀ ವಿಚಾರವು. *

---

## ಮೃಗಶಿರೋನಕ್ಷತ್ರಕ್ಕೆ ೫.

ಶ್ಲೋ॥ ಮಾಂಗಲ್ಯಂಚಪಹೋಮದಾನಸುತಪೋ ಯಜ್ಞಕ್ರಿಯಾಸಾಧನಂ। ಕೃಷ್ಯಾರ್ರಂಭವನಪ್ರವೇಶಗಮನ ಕ್ಷೌರಕ್ರಿಯಾಸಂಗಮಾ। ಶಾಂತಿಸ್ನಾನಮಹಾಭಿಷೇಕನಿಯಮಾ ದೇವಾಗ್ನಿಪಿತ್ರರ್ಚನಂ ಕುರ್ಯಚ್ಛಾಂತಿಕ ಪೌಷ್ಟಿಕಾನಿಕೃಷಿಮುಪ್ಯಾಹುಶ್ಯಶಾಂಕೇಶುಭಂ ॥ ವೆ-ಪೂ-ಕಾ-ಕಿ- ಮೃಗಶಿರಃ ಶ್ವೇತವರ್ಣಂ।. ತ್ರಿತಾರ। ನಪುಂಸಕಂ। ಯೋನಿರ್ಭುಜಂಗಃ। ದೇವಗಣಃ। ಸೋಮೋದೇವತಾ। ವೈಶ್ಯಜಾತಿಃ। ತಿರ್ಯಙ್ಮುಖಂ। ಮಂಡಲೋಚನಂ। ಮೃದುಃ। ಅಂತಸ್ಸಮತಾರಾ ಪಟ್ಟಣಂಸ್ಥಾನಂ। ವಾಯುಮಂಡಲಂ। ಖಾದಿರವೃಕ್ಷಃ। ಕುಕ್ಕುಟಪಕ್ಷೀ। ಓಂಕಾರಸ್ವರಃ। ಅಸ್ಮಿನ್ಮೃಗಶಿರೇಚಂದ್ರಮಾಜಾತಃ। ಚತುರ್ದಶಘಟಿಕಾನಂತರಂ ವಿಷನಾಡ್ಯಶ್ಚತಸ್ರಃ। ಯಾನೆಗುಡಮಾಷಭಕ್ಷ್ಯಂ। ಪೂರ್ವೋತ್ತರಪ್ರಯಾಣೇಶುಭದಂ। ಜ್ವರೇಪ್ರಾಣಭಯಂ। ಅಥವಾಮಾಸಾರಿಷ್ಟಂ। ತಚ್ಛಾಂತಿಃ। ಶ್ವೇತವರ್ಣಂ। ದ್ವಿಭುಜಂ। ವರದಾಭಯಪಾಣಿನಂ। ಅಶ್ವವಾಹನಂ। ಚಂದ್ರಮುವಾಹಯೇತ್। ಶ್ವೇತವಸ್ತ್ರಂ। ಶ್ವೇತಚಂದನಂ। ಕುಮುದಪುಷ್ಪಂ। ದಶಾಂಗಧೂಪಂ। ಪರಮಾನ್ನ

ನೈವೇದ್ಯಂ। ಮಂತ್ರಸ್ತು।ನಮೋನಮೋಭವತಿ-ಮಾಯುಃ। ಇತಿಮಂತ್ರೇಣಷೋಡಶೋಪಚಾರೈಸ್ಸಂಪೂಜ್ಯ। ಗಾಯತ್ರ್ಯಾಷ್ಟೋತ್ತರಶತಂಹುತ್ವಾ ಗಂಧಮಾಲ್ಯೈಃ ಕ್ಷೀರೋದನಬಲಿಂಹರೇತ್। ಮಾಸಾತ್ಸುಖೀಭವತಿ। ತಿಥಿವಾರ ನಕ್ಷತ್ರಯೋಗಃ । ಆದಿವಾರೇದುಷ್ಟಯೋಗಃ । ಸೋಮೇಮೃತ್ಯುಯೋಗಃ। ಅಷ್ಟಮ್ಯಾಂನಾಶಯೋಗಃ। ಕುಜೆ ಆನಂದಯೋಗಃ।ಬುಧೆಸ್ಥಿರಯೋಗಃ। ಗುರೌನಾಶಯೋಗಃ।ಭೃಗೌಅಮೃತಸಿದ್ಧಯೋಗಃ। ಶನೌಸಿರ್ಜೀವಯೋಗಃ। ಉತ್ತರಾಷಾಢಾನಕ್ಷತ್ರೆ ಕ್ರೂರಸಿತೇಮಹಾಶೂಲಯೋಗಃ। ಅಸ್ಮಿನ್ ಉತ್ಪಾತದರ್ಶನೇ ವಾತಪೈತ್ಯಜ್ವರಾದಿಭಯಂಭವತಿ। ಕಾರ್ತಿಮಾಸೇಶೂನ್ಯಂ। ಇಂದ್ರಚಾಪಪರಿವಿಷದರ್ಶನೇವೃಷ್ಟಿಃ।ಸಂಕ್ರಮೇಮಧ್ಯಾರ್ಘಃ। ಪ್ರಥಮರಜಸ್ವಲಾಕನ್ಯಾಧನಪುತ್ರವತೀಭವತಿ। ಋತು। ಪುಂಸವನ । ಸೀಮಂತ ನಾಮಕರಣ। ಅನ್ನಪ್ರಾಶನ। ಚೌಲ। ಉಪನಯನ । ವೇದಶಾಸ್ತ್ರಾಭ್ಯಾಸ। ಸಮಾವರ್ತನ । ವಿವಾಹ। ಕ್ಷೌರ। ಅಭ್ಯಂಗ। ನವಾಂಬರ। ಮುಕ್ತಾಭರಣಭೂಷಣ। ಪಟ್ಟಾಭಿಷೇಕ। ಮಹೋತ್ಸವ। ಗಜತುರಗ ಆಂದೋಳಿಕಾರೋಹಣ। ವಾಸ್ತು। ಪುರಗ್ರಹಾದಿಪ್ರವೇಶ। ಕೃಷಿಪ್ರಯೋಗ। ಬೀಜಾವಾಪ। ಶ್ರಾದ್ಧ। ಯಾತ್ರೆ। ಭೈಷಜ್ಯ ಇತ್ಯಾದಿ । ಶುಭಕಾರ್ಯೇಷುಪ್ರಶಸ್ತಂ । ಮೃಗಶಿರೋಜಾತಸ್ಯಗುಣಾಃ । ಉತ್ಸಾಹಶೀಲಃ। ಪಾಪಭೀರುಃ। ಮಾತಾಪಿತೃಭಕ್ತಃ। ಸ್ವತಂತ್ರಹ। ಚಿರಾಯುಃ। ಪೀನವಕ್ಷಾಃ। ಅತಿನಿಷ್ಠುರವಾಕ್। ವಿಪುಲಭುಜಃ। ಏಕಸಂಧಿಗ್ರಾಹೀ। ಪ್ರಥಮಪಾದಸ್ಯರವಿಃ। ಜಾರಾಂಶಃ। ಸ್ಥೂಲಕಾಯಃ। ಧನಿಕಃ। ಶತ್ರುಘಾತೀ । ದ್ವಿತೀಯಪಾದಸ್ಯಸೌಮ್ಯಃ। ನಪುಂಸಕಾಂಶಃ।ಯಜ್ಞಕರ್ಮರತಃ। ಜ್ಞಾನವಾನ್।ಭೋಗೀ। ಅರ್ಥಲುಬ್ಧಃ। ಅನಪತ್ಯಃ। ತೃತೀಯಪಾದಸ್ಯಭೃಗುಃ। ಅಭಯಾಂಶಃ। ಉದಾರಶೀಲಃ।ಸುಮುಖಃ। ಮೇಧಾವೀ।ಚತುರ್ಥಪಾದಸ್ಯಕುಜಃ।ದರಿದ್ರಾಂಶಃ। ಪರದ್ವೇಷೀ।ಕಾಮುಕಃ। ಬಹುಪುತ್ರವಾನ್। ಫಲಕಾಲಪರಿತ್ಯಾಗೀ। ವ್ರಣಾಂಕಿತಶಿರಾಃ। ಅಸ್ಮಿನ್ನಕ್ಷತ್ರೇಜಾತಸ್ಯ ಅಂಗಾರಕಮಹಾದಶಾಸಪ್ತವರ್ಷಾಣಿ । ಅಂಗಾರಭುಕ್ತಿಃಚತುರ್ಮಾಸಾಃ। ಸಪ್ತವಿಂಶತಿದಿನಾನಿ।ಅಷ್ಟಮಮಾಸೇ ಗ್ರಹರೋಗವಿಕಾರಃ। ತೃತೀಯವರ್ಷೇಚತುಷ್ಪಾದಭಯಂ। ಅಥವಾಭ್ರಾಂತಿಶ್ಚ। ಕುಕ್ಷಿರೋಗಃ। ದಶಮವರ್ಷೇಮಹಾವ್ಯಾಧಿಃ। ಸ್ಥಾನಭ್ರಷ್ಟೋವಾ । ಪಂಚಾಶದ್ವರ್ಷೇ ಪುತ್ರದಾರಾದಿನಾಶಃ। ಅಷ್ಟಮಷಷ್ಠಿವರ್ಷೇ ಅಪಮೃತ್ಯುಃ । ತತ್ಪರಿಹರತಿ। ಚತುರಶೀತಿವರ್ಷಾಣಿ ಪರಮಾಯುಃ। ಇತಿ ಮೃಗಶಿರೋ ನಕ್ಷತ್ರವಿಚಾರಃ। ❋

ಟೀಕೆ: ವೆಂಕಟ ೧, ಓಬಳ ೨, ಕಾಟಣ್ಣ ೩, ಕಿಟ್ಟಣ್ಣ ೪, ಈ ಮೇರೆ ಪಾದಗಳ ಮೊದಲಕ್ಷರಗಳ ಹೆಸರುಳ್ಳವರಿಗೆ ಮೃಗಶಿರೋ ನಕ್ಷತ್ರವೆಂದರಿವುದು. ಇದಕ್ಕೆ ಚಂದ್ರನು ದೇವತೆ, ವೈಶ್ಯಜಾತಿ ಇದರಲ್ಲಿ ವಡವೇ ಹೋದರೆ ಮೂರು ದಿನಗಳೊಳಗಾಗಿ ಪತ್ತೆ ಆದೀತು, ಬೆಲ್ಲವನ್ನ ತಿಂದು ಮೂಡಲ ಕಡೆಗೂ ಬಡಗಲ ಕಡೆಗೂ ಸ್ವೈಣವಾಗಬಹುದು. ಇದರಲ್ಲಿ ಜ್ವರಾದಿರೋಗಗಳು ತಗಲಿದರೆ ಶೀತವಾತ ಭಯವುಂಟು, ೮ ದಿನ ಅಥವಾ ೮ ತಿಂಗಳ ಗ್ರಹಚಾರ ಕಾಡುತ್ತೆ, ಇದಕ್ಕೆ ಬಿಳೀ ಅಲಂಕಾರದಿಂದ ಚಂದ್ರ ಪ್ರತಿಮೆಯನ್ನು ಆರಾಧಿಸಿ ಹಾಲೂ ಅನ್ನ ಬಲಿಕೊಟ್ಟು ವಸ್ತ್ರದಾನ ಗೋದಾನಗಳಂ ಮಾಡಿದರೆ ಕ್ಷೇಮ ವುಂಟು. ಇದರಲ್ಲಿ ಯಾವಯೋಗ ಕೂಡಿದರೆ ಅದರ ಹೆಸರಿಗೆ ತಕ್ಕ ಫಲಗಳನ್ನು ಕೆಲಸಗಳಲ್ಲಿ ಹೇಳಬೇಕು. ಈ ನಕ್ಷತ್ರದಲ್ಲಿ ಹೆಣ್ಣು ಮೈನೆರೆದರೆ ಮುತ್ತೈದೆಯಾಗಿಯೂ ; ಮಕ್ಕಳುಳ್ಳವಂತೆಯಾಗಿಯೂ , ಭಾಗ್ಯವತಿಯಾಗಿಯೂ, ಬದುಕುವಳು. ಈ ನಕ್ಷತ್ರದಲ್ಲಿ ಗರ್ಭಾಧಾನ, ಸೀಮಂತ. ಅನ್ನಪ್ರಾಶನ , ಚೌಲ , ಅಕ್ಷರಾಭ್ಯಾಸ , ಶಾಸ್ತ್ರಾಭ್ಯಾಸ , ಉಪನಯನ, ಸಮಾವರ್ತನ, ವಿವಾಹ, ನೂತನ ವಸ್ತ್ರಧಾರಣ , ಆಭರಣಧಾರಣ, ಕ್ಷೌರ, ಅಭ್ಯಂಜನ, ಮನೆ ಕಟ್ಟುವಿಕೆ, ಹೊಲ ಗೆಯ್ಯುವಿಕೆ, ಬಿತ್ತನಹಾಕುವಿಕೆ, ಭೂಮಿ ತೋಡಿಸುವಿಕೆ, ತೋಪು ಹಾಕಿಸುವಿಕೆ, ಪ್ರಯಾಣಹೊರಡುವಿಕೆ, ಮದ್ದು ತಕ್ಕೊಳ್ಳುವಿಕೆ, ಮಂತ್ರಜಪ, ದೇವರಉತ್ಸವ, ರಾಜದರ್ಶನ, ಸ್ನೇಹ ಪರಿಚಯಗಳಿಗೆಆರಂಭ. ಹೊಸಲೆಕ್ಕ ಬರಿಯುವಿಕೆ, ಜವಳಿಅಂಗಡಿ ಇಡುವಿಕೆ, ಆಕಳನ್ನುಮನೆಗೆತರುವಿಕೆ, ಹೆಣ್ಣು ಮಕ್ಕಳನ್ನುಕರೆತರುವಿಕೆ ಇಂಥಾ ಒಳ್ಳೇ ಕೆಲಸಗಳನ್ನು ಮಾಡಬಹುದು, ಈ ನಕ್ಷತ್ರದಲ್ಲಿ ಹುಟ್ಟಿದವನು ಸೌಮ್ಯ ಸ್ವಭಾವವುಳ್ಳವನಾಗಿ ವೃದ್ಧಿಹೊಂದುವನು. ೧ನೇ ಪಾದದೊಳಗೆ ಹಾಪರವು, ಕಾಯಪುಷ್ಟಿ, ಧನ, ಜಯವುಳ್ಳವನಾಗುತ್ತಾನೆ. ೨ನೇ ಪಾದದಲ್ಲಿ ಪುರುಷ ಶಕ್ತಿ ಕಡಮೆ, ಯಜ್ಞದಾನಗಳನ್ನು ಮಾಡುವನ್ನು, ಜ್ಞಾನವೂ, ಸುಖವೂ, ಉಂಟು, ಧನಲೋಭಿಯಹನು , ಮಕ್ಕಳು ಕಡಮೆ , ೩ನೇ ಪಾದದಲ್ಲಿ ಧೈರ್ಯಶಾಲಿ, ಧಾರಾಳಿ, ಚಲುವ, ಬುದ್ಧಿವಂತ, ೪ನೇ ಪಾದದೊಳಗೆ ಧನವಿಲ್ಲ, ಜನದ್ವೇಷ, ಕಾಮಾತುರ , ಮಕ್ಕಳೊಂದಿಗೆ , ಕೆಲಸಕ್ಕೆ ಕಷ್ಟಪಟ್ಟು ಅದು ಫಲಕ್ಕೆ ಬರುವಾಗ್ಯೆ ಬಿಟ್ಟು ಬಿಡುವನು , ತಲೆ ಹುಣ್ಣುಳ್ಳವ , ಈ ನಕ್ಷತ್ರಕ್ಕೆ ಮೊದಲು ಅಂಗಾರಕ ದಶೆ ೭ ವರುಷ, ಅಂಗಾರಕ ಭುಕ್ತಿ ೪ ತಿಂಗಳೂ

೨೭ದಿನ. ೮ನೇ ತಿಂಗಳಲ್ಲಿ ಗ್ರಹದೋಷ, ಹೊಟ್ಟೆಬ್ಯಾನೆ, ೧೫ವರುಷಕ್ಕೆರೋಗ ಸ್ಥಳ ತಪ್ಪುವಿಕೆ ೫೦ನೇ ವರುಷದಲ್ಲಿ ಸಂಸಾರ ಸುಖಕ್ಕೆ ಬಂಗಗಳು, ಬಂಧುವಿಯೋಗ ೬—೭— ವರುಷಗಳ ಅಪಮೃತ್ಯುಕಳೆದರೆ ೮೪ವರುಷಗಳ ಅಯುಷ್ಯವಿಧೆ. ಹಿರಿಯರು ಮಾಡಿದಪುಣ್ಯದಿಂದ ಚಿಕ್ಕಂದಿನಲ್ಲಿ ಅಪಮೃತ್ಯುಗಳನ್ನು ಕಳೆಯಬೇಕು. ತಾನು ಈಗ ಪುಣ್ಯಕರ್ಮಗಳನ್ನು ಮಾಡುತ್ತಾ ಬಂದರೆ ಆಯುವೃದ್ಧಿ, ಈಗ ಪಾಪಕರ್ಮಗಳನ್ನೇ ಮಾಡುತ್ತಾಬಂದರೆ ಆಯುಷ್ಯಕ್ಷಯ,ಸತ್ಯದಯಾದಿ ಗುಣಗಳೂ, ಜಿತೇಂದ್ರಿಯತ್ವವೂ ಆಯುಷ್ಯವನ್ನು ಹೆಚ್ಚಿಸುವವು. ಪುಣ್ಯಪಾಪಗಳ ವಜಾವಟ್ಟದಲೆಖ್ಖಪ್ರಕಾರ ಬದುಕುವನು, ಸರ್ವ ನಕ್ಷತ್ರಗಳಿಗೂ ಆಯುಷ್ಯಹೀಗ ನೋಡತಕ್ಕದ್ದು. ಇತಿ ಮೃಗಶಿರೋನಕ್ಷತ್ರವಿಚಾರಃ॥

## ಆದ್ರಾ ನಕ್ಷತ್ರಕ್ಕೆ ೬.

ಶ್ಲೋ॥ ಯುದ್ಧಂಮಾರಣಮುಗ್ನಿಕರ್ಮವಿಷಯತ್ಯಾಗಂಚಭೇದಂರಿಪೋ। ರ್ಬ್ಯಾತಾವೇಶವಿಮೋಚನೇಶಪಥಮುತ್ಕ್ರೋಚಂಚಚೌರ್ಯಾದಿಕಂ ॥ ಶಸ್ತ್ರಂದ್ಯೂತಪಣಂನಿಯುದ್ಧಮುಭಯೋರ್ವಾದಂಶಿಲಾಭೇದನಂ। ವೃಕ್ಷೇಭೇದನಮಿಷ್ಟಕಾದಹನಮಪ್ಯಾಹುಶ್ಚಭಂರೌದ್ರಭೇ ೧॥ ಕೂಖಂಬಭೂಆದ್ರಾ! ಏಕತಾರಾ। ರಕ್ತವರ್ಣಃ, ಶ್ವಯೋನಿಃ। ಮನುಷ್ಯಗಣಃ। ಸ್ತ್ರೀನಕ್ಷತ್ರಂ। ದಾರುಣಂ। ಮಧ್ಯಲೋಚನಂ। ಶೂನ್ಯಸ್ಥಾನಂ। ರುದ್ರೋದೇವತಾ। ರಕ್ತಖಾದಿರವೃಕ್ಷಃ। ಕ್ರೌಂಚಪಕ್ಷೀ। ಏಕಾರಸ್ವರಃ। ಏಕವಿಂಶತಿಘುಟಿಕಾನಂತರಂ ವಿಷನಾಡ್ಯಶ್ಚತಸ್ರಃ। ಪ್ರಯಾಣೇವರ್ಜಂ। ಗಮನಾವಶ್ಯಕತ್ವೇ ಘುಟಿಕಾಚತುಷ್ಟಯ ಮಾದಿಭಾಗೇತ್ಯಕ್ತ್ವಾಮೃಗರಕ್ತಂಪೀತ್ವಾಪ್ರಾಚೀಂಗಛೇತ್ ಜಯೀಭವತಿ ॥ ಜ್ವರೇಪ್ರಾಣಸಂಶಯಃ। ಪಿತ್ತವಾತಾಧಿಕ್ಯಂ। ಮಾಸಾರಿಷ್ಟಂ। ಶಾಂತಿಸ್ತು। ಶ್ವೇತವರ್ಣಂತ್ರಿಣೇತ್ರಂಚದ್ವಿಭುಜಂಶೂಲಧಾರಿಣಂ। ರುದ್ರಮಾರಾದಯೆನ್ನೀಲರಕ್ತಗಂಧಾದಿಭಿರ್ನರಃ। ದುತ್ತೂರಪುಷ್ಪಂಶಾಕಾಢ್ಯತಂಡುಲಾನ್ನಂನಿವೇದಯೇತ್, ನಮಶ್ಶಂಭವೇಚ—ಯಚ। ಕದ್ರುದ್ರಾಯ—ಹೃದೆ। ಇತಿಮಂತ್ರಾಭ್ಯಾಂರುದ್ರಮರ್ಚಯೇತ್। ಜಪಾನಂತರಂ। ಮಧುನಾಜ್ಯೇನಗಾಯತ್ರ್ಯಾಷ್ಟೋತ್ತರಶತಂಹುತ್ವಾ ರಕ್ತೋದನಬಲಿಂಹರೇತ್। ಶ್ವೇತಧೇನುಂದದ್ಯಾತ್। ಸುಖೀಭವತಿ ಯೋಗಾಸ್ತು। ರವಿವಾರೆ ಮಾರಣಯೋಗಃ। ಸೋಮಬುಧಯೋರ್ಯಮಕಂ

ಟಕೇ। ಕುಜೇಮೃತ್ಯುರ್ಗುರೌರಂಧ್ರಾಂಶುಭಂಶುಕ್ರಕರ್ಕಜೇಹತಿಃ॥ ಕ್ರೂರಗ್ರಹ ಪೂರ್ವಾಷಾಢಾನಕ್ಷತ್ರಸ್ಥಿತೆಮಹಾಶೂಲಯೋಗಃ । ಪುಷ್ಯಮಾಸೇಶೂನ್ಯಂ। ಉತ್ಪಾತದರ್ಶನೇಧಾನ್ಯಕ್ಷೀರಸಮೃದ್ಧಿಃ । ಪರಿವೇಷೇಂದ್ರಚಾಪದರ್ಶನೇವೃಷ್ಟಿಃ। ಸಂಕ್ರಮೇಮಧ್ಯಾರ್ಘಃ । ಪ್ರಥಮರಜಸ್ವಲಾದುಃಖಭಾಗಿನೀಭವತಿ । ಶತ್ರುಬಂಧನ। ಅಗ್ನಿಪ್ರವೇಶ। ಶ್ಮಶಾನಕ್ರಿಯಾ। ಕ್ಷೀರಗ್ರಹಣ। ಶಸ್ತ್ರಾಭ್ಯಾಸ। ಚೋರಾನ್ವೇಷಣ।ಭೂತೋಚ್ಚಾಟನ। ಮಂತ್ರಪ್ರಯೋಗ। ಶಿವಪ್ರತಿಷ್ಠಾ। ಋಣಕರಣ। ಶ್ರಾದ್ಧಾದಿಕರ್ಮಸುಪ್ರಶಸ್ತಾ । ಜಾತಕಗುಣಾಸ್ತು । ಕ್ರಯವಿಕ್ರಯಕಾರೀ— ಕವಿಃ— ಪಾಪಕರ್ಮಾ— ಹಿಂಸಕಃ—ಕೃತಘ್ನಃ— ಆಚಾರವಾನ್ ಅಲ್ಪಶ್ರದ್ಧಃ—ಸ್ಥಿರಾಯುಃ—ಪ್ರಥಮಪಾದಸ್ಯಗುರುಃ—ಕೃಪಾಳುಃ—ಪ್ರಸನ್ನವದನಃ—ಕುಶಲಃ—ದ್ವಿತೀಯಪಾದಸ್ಯಮಂದಃ—ಶೀಲಾಂಶಃ- ಸಂಸಾರಭಂಗಃ—ಗರ್ವೀ—ತೃತೀಯಪಾದಸ್ಯಮಂದಃ—ಉಗ್ರಾಂಶಃ—ಮತಿಹೀನಃ—ಚತುರ್ಥಪಾದಸ್ಯಗುರುಃ—ಉತ್ಕೃಷ್ಟಾಂಶಃ—ಸುರ್ಮಂತ್ರೀ— ಸಾಹಸಕಾರೀ—ಪರದ್ವೇಷಿ—ಜಾತಸ್ಯಆದೌರಾಹುದಶಾ—ಅಷ್ಟಾದಶವತ್ಸರಾಃ—ರಾಹುಭುಕ್ತಿಃ ೨ವರ್ಷಾಣಿ ೮ ಮಾಸಾಃ ೧೨ ದಿನಾನಿ—ಪ್ರಥಮೇಹನಿ । ಸಪ್ತಮಮಾಸೇ । ವತ್ಸರೆ ವಾ ಅಪಮೃತ್ಯುಃ। ಅಷ್ಟಮೇಶತ್ರುಭಯಂ । ಪಂಚಾಶದಬ್ದೆ ಅಗ್ನಿಭಯಂ । ಅಷ್ಟಾದಶಾಬ್ದೆ ವಿರೋಧಿಭಯಂ। ಏಕೋನವಿಂಶತ್ಯಬ್ದೆ ಅಪಮೃತ್ಯುಃ। ತತ್ಪರಿಹಾರೆ ಸತಿ ಸಪ್ತಾಶೀತಿವರ್ಷಾಣಿ ಪರಮಾಯುಃ।ಇತ್ಯಾದ್ರಾವಿಚಾರಃ। ೬॥

ತಾ॥ ಆಕಾಶದಲ್ಲಿ ಹವಳದ ಹಾಗೆ ಕೆಂಪಾಗಿರುವದೊಂದುನಕ್ಷತ್ರವು ಮೃಗಶಿರೆಗೂ ಪುನರ್ವಸುವಿಗೂ ನಡುವೆ ಇರುತ್ತೆ, ಅದರಹೆಸರು ಆರ್ದ್ರೆ. ಅದಕ್ಕೆ ರುದ್ರನುದೇವರು. ಇನುದಾರುಣ ನಕ್ಷತ್ರವು, ಇದರಲ್ಲಿ ಹೋದವಡವೆ ಸಿಕ್ಕೋಣವು ಆಲಸ್ಯ—೧ನೇಪಾದಕ್ಕೆ ಕೂ. ೨ನೇಪಾದಕ್ಕೆ ಘ. ೩ನೇಪಾದಕ್ಕೆ ಙ. ೪ನೇ ಪಾದಕ್ಕೆ ಛ. ಇವು ಹೆಸರಿನ ಮೊದಲನೇ ಅಕ್ಷರಗಳಾಗಿರುವವು. ಮನುಷ್ಯಗಣ ನಾಯಿಜಾತಿ— ಚತುಷ್ಪಾನ್ನಕ್ಷತ್ರ—ಊರ್ಧ್ವಮುಖ—ಕೆಂಪು ಕಗ್ಗಲೀಗಿಡ—ಏಕಾರಸ್ವರ— ಇದು ಪ್ರಯಾಣಕ್ಕೆ ವರ್ಜನಕ್ಷತ್ರ— ಜ್ವರಬಂದರೆ ೧ ತಿಂಗಳು ಕಷ್ಟ— ಬಿಳೀಬಟ್ಟೆ—ಬಿಳೀಗಂಧಾಕ್ಷತೆಗಳಿಂದ ರುದ್ರಪ್ರತಿಮೆಯಂಪೂಜಿಸಿ ಹೋಮಮಾಡಿ ಕೆಂಪನ್ನ ಬಲೀಕೊಡಬೇಕು. ಕೆಂಪು ಆಕಳನ್ನು ಅಥವಾ ಬಿಳೀಆಕಳನ್ನು ದಾನಮಾಡಬೇಕು. ತಿಂಗಳಿಗೆ ಆರೋಗ್ಯವಾದೀತು. ಯೋಗಗಳು ಕೂಡಿದರೆ ಹೆಸರಿಗೆತಕ್ಕ ಫಲವಾಗುತ್ತೆ. ಈ ನಕ್ಷತ್ರದಲ್ಲಿ ಉತ್ಪಾತಕಂಡರೆ ಸುಭಿ

ಕ್ಷ, ಸೂರ್ಯ ಚಂದ್ರರಿಗೆ ಪರಿವೇಷಕಟ್ಟಿದರೂ ಬಾಂದಳದಲ್ಲಿ ಬಿಲ್ಲು ಮಾಡಿದರೂ ಮಳೆ ಬರುತ್ತೆ, ಸಂಕ್ರಮಣ ಕೂಡಿದರೆ ಧಾರಣೆವಾಸಿ ಸಮ. ಹೆಂಣು ಮೈತ್ರಿ ನೆರದರೆ ದುಃಖಪಟ್ಟಳು, ಶತ್ರುಗಳನ್ನು ಶೆರೆಹಿಡುಕೊಳ್ಳುವಿಕೆ, ಬೆಂಕಿಯಲ್ಲಿ ಮಾಡತಕ್ಕ ಕೆಲಸಗಳು, ಹಾಲು ಕರಕೊಳ್ಳುವಿಕೆ, ಶಸ್ತ್ರ ವಿದ್ಯಾಭ್ಯಾಸ— ಗರಡಿಸಾಧನೆ= ಕಳ್ಳರನ್ನು ಪತ್ತೇ ಮಾಡುವಿಕೆ— ಪಿಶಾಚವನ್ನು ಬಿಡಿಸೋಣ— ಶ್ಮಶಾನವನ್ನು ಪ್ರವೇಶಿಸೋಣ— ಶಿವಪ್ರತಿಷ್ಠೆ ಶಾಬರಮಂತ್ರ ಪ್ರಯೋಗಇಂಥಾ ದಾರುಣ ಕಾರ್ಯಗಳಿಗೆ ಪ್ರವರ್ತಿಸಿದರೆ ಜಯವಾದೀತು, ಜಾತಕನು ವ್ಯಾಪಾರದಲ್ಲಿ ಹಣಕಳಕೊಂಡನು. ಕೊಂಡು ಮಾರುವದರಲ್ಲಿ ಬುದ್ಧಿವಂತ— ಮಾಡಿದ ಉಪಕಾರವನ್ನು ಮರತುಹೋಗುತ್ತಾನೆ. ೧ನೇ ಪಾದಕ್ಕೆ ದಯಾವಂತ, ಗುಣವಂತ, ೨ನೇ ಪಾದಕ್ಕೆ ಕಲ್ಲುಕೆಲಸ ಮಾಡಿಸುವನು. ಯಾವಾಗಲೂ ವ್ಯಸನ ಪಟ್ಟನು. ೩ನೇ ಪಾದಕ್ಕೆ ಆಲಸ್ಯಗಾರ, ಮುಂಗೋಪಿ ೪ನೇ ಪಾದಕ್ಕೆ ಬುದ್ಧಿವಂತ, ಉತ್ಕೃಷ್ಟಾಂಶೆ— ಆದರೆ ದುರಾಲೋಚನೆ ಮಾಡುವನು, ಜನ್ಮಾದಿಯಲ್ಲಿ ರಾಹುದಶೆ ೧೮ ವರುಷಭುಕ್ತಿ ೩-೨ ತಿಂಗಳು ೧೨ ದಿನ ೧—೭—೧೮—೧೯—೫೦ ವರುಷಗಳಲ್ಲಿ ಅಪಮೃತ್ಯು. ಇದೆಲ್ಲಾಕಳೆದುಳಿದರೆ ೮೭ ವರುಷಪರಮಾಯುಷ್ಯ, ಇಂತು ಆರ್ದ್ರಾನಕ್ಷತ್ರ ವಿಚಾರವು.

---

## ಪುನರ್ವಸೂ ನಕ್ಷತ್ರಕ್ಕೆ ೭.

ಶ್ಲೋ॥ ಸೀಮಂತಪುಂಸವನಪೌಷ್ಟಿಕಚೌಲಮೌಂಜೀ । ವಿದ್ಯಾವ್ರತಾನಿ ವಿವಿಧಾಧ್ಯಯನಂಪ್ರಯಾಣಂ । ಆಂದೋಳಿಕಾದಿವರವಾಹನಛತ್ರಶಯ್ಯಾಲಂಕಾರಮಪ್ಯದಿತಿಭೇಶುಭಮಾಹುರಾರ್ಯಾಃ ॥ ಕೆ—ಕೋ—ಹಾ—ಹಿ ಪುನರ್ವಸು, ಗೃಹವತ್ಪುನರ್ವಸೂಪಂಚತಾರಾ—ಪುರುಷಜಾತಿಃ— ದೇವಗಣಃ— ಮಾರ್ಜಾಲಯೋನಿಃ— ಆದಿತಿರ್ದೇವತಾ। ವೈಶ್ಯವರ್ಣಃ—ತ್ರಿಪಾದಿ— ತಿರ್ಯಙ್ಮುಖಂ— ಸುಲೋಚನಂ— ಚರನಕ್ಷತ್ರಂ—ನಷ್ಟದ್ರವ್ಯಂನಲಭ್ಯತೆ—ಬಾಹ್ಯಂ ಪಟ್ಟಣಸ್ಥಾನಂ—ವಾಯುಮಂಡಲಂ—ವೇಣುವೃಕ್ಷಃ— ಹಂಸಪಕ್ಷೀ। ಏಕಾರೌಕಾರಾಕ್ಷ್ವರೌ—ಅಸ್ಮಿನ್ರಾಮಾವತಾರಃ । ತ್ರಿಂಶದ್ಘಟಿಕಾನಂತರಂ ವಿಷನಾಡ್ಯಶ್ಚತಸ್ರಃ— ಪ್ರಯಾಣೇಪ್ರಶಸ್ತಂ। ಜ್ವರೇಸಪ್ತಾಹಮನಿಷ್ಟಂ। ತಚ್ಛಾಂತಿಸ್ತು । ಕೃಷ್ಣವರ್ಣಾಂ ಚತುರ್ಭುಜಾಂ= ಕಮಂಡಲ್ವಕ್ಷಸೂತ್ರಾದಿಧರಾಂ। ಆದಿತಿಮಾರಾಧಯೇತ್

ಪೀತವಸ್ತ್ರಂ। ಕೇಸರೀಗಂಧಃ।ಮಲ್ಲಿಕಾಪುಷ್ಪಂ—ಶ್ರೀಗಂಧಧೂಪಃ— ಗುಡಾಂ ನನೈವೇದ್ಯಂ। ಅತಿಕಿದ್ರ್ಯಾಃ— ಅದಿತಿರ್ಜನಿತ್ವಂ। ಆದಿವಾರೆಸಿದ್ಧಯೋಗಃ। ಸೋಮೆಶುಭಂ— ಕುಜೆಮರಣಂ—ಬುಧಶನ್ಯೋಃ ಮೀರಾವೇಶಯೋಗಃ ಗುರೌ ಅಪಮೃತ್ಯುಃ ಶುಕ್ರೆಶುಭಂ—ಶನೌಸಪ್ತಮ್ಯಾಂಶೂಲಂ—ಮೂಲನಕ್ಷತ್ರೆ ಕ್ರೂರಗ್ರಹಸ್ಥಿತೌ ಮಹಾಶೂಲಯೋಗಃ।ಜ್ಯೇಷ್ಠಮಾಸೆಶಾನ್ಯಂ—ಉತ್ಪಾತೆ ವಾಯುಭಯಂ। ಇಂದ್ರಚಾಪೆವೃಷ್ಟಿಃ— ಸಂಕ್ರಮಣೆಮಧ್ಯಾರ್ಘಃ— ಪ್ರಥಮರಜಸ್ವಲಾಕಪಟಕಲ್ಮಪಚಿತ್ತಾಭವತಿ ವಿವಾಹೆವರ್ಜಿತಂ—ಅಸ್ಮಿನ್‌ಜಾತಃಉತ್ಕೃಷ್ಟಗುಣಃ—ದಾನಶೀಲಃ—ಅಲ್ಪಸಂತುಷ್ಟಿಃ—ಜಿತೇಂದ್ರಿಯಃ— ವಿದ್ವಾನ್— ಸರಸವಾಕ್—ಗೂಢಕಾಮಃ—ಹಾಸ್ಯಪ್ರಿಯಃ ಉನ್ಮತ್ತತುಲ್ಯಂ— ಮಂದಭೋಜನಃ—ಸುಂದರಃ—ಉದರೆ ಮತ್ಸ್ಯಾಂಕಿತಃ—ಪ್ರಥಮಪಾದಸ್ಯಚೋರಾಂಶಃ, ವ್ಯಾಧಿಪೀಡಿತಃ—ಪಿಶುನಃವ್ಯಸನೀ— ದ್ವಿತೀಯಪಾದಸ್ಯ—ಶುಕ್ರಃ—ಭೋಕ್ತಾಂಶಃ—ವಿಶಾಲಾಕ್ಷಃ— ಪರೋಪಕಾರೀ— ತೃತೀಯಪಾದಸ್ಯ—ಬುಧಃ—ವಿಚಕ್ಷಣಃ ಕಲಿಃ—ಧೀರಃ— ಚತುರ್ಥಪಾದಸ್ಯ ಚಂದ್ರಃ—ಧನವಾನ್—ಜಿತೇಂದ್ರಿಯಃ ಭೋಗಿ— ಆದೌಗುರುಮಹಾದಶಾಷೋಡಶವತ್ಸರಾಃ। ಅಂತರ್ದಶಾತು ಪಂಚವಿಂಶತಿಮಾಸಾಃ ಅಷ್ಟಾದಶದಿನಾನಿಚ। ಜಾತಸ್ತು ಉಷ್ಣವಾತಪ್ರಕೃತಿಃ— ಪ್ರಥಮವರ್ಷೆ ಪಕ್ಷಿದೋಷಃ ಕುಕ್ಷಿರೋಗಃ। ಪಂಚಮೆಮಾತೃರೋಗಃ। ಷಷ್ಠೆಪಿತೃರೋಗಃ। ಬಾಲ್ಯೆಪಿತೃಗಂಡಃ—ಷೋಡಶೆ ಅಪಮೃತ್ಯುಃ— ಸಪ್ತದಶೆ ದೇಶಭ್ರಮಣಂ— ದ್ವಾತ್ರಿಂಶದ್ವತ್ಸರೆ ಜಲಗಂಡಃ। ಪಂಚತ್ರಿಂಶದ್ವತ್ಸರೆಮಹಾಯಶೋಲಾಭಃ। ದ್ವಿಪಂಚಾಶದ್ವತ್ಸರೆ ಸ್ತ್ರೀಪುತ್ರಹಾನಿಃ— ಅಶೀತಿವತ್ಸರೆಮಹಾಗಂಡಃ। ತತ್ಪರಿಹಾರೆಸತಿ ಷಣ್ಣವತಿವರ್ಷಾಣಿ ಪರಮಾಯುಃ। ಇತಿ ಪುನರ್ವಸೂ ವಿಚಾರಃ। ೮॥

ತಾತ್ಪರ್ಯವು। ಆಕಾಶದಲ್ಲಿ ಮನೆಯಹಾಗೆ ೫ ನಕ್ಷತ್ರಗಳು ಪುನರ್ವಸುವೆಂಬ ಹೆಸರುಳ್ಳದ್ದು, ನಾಲ್ಕು ಪಾದಗಳಿಗೂ ಕ್ರಮವಾಗಿ, ಕೆ—ಕೋ—ಹಾ—ಹಿ ಈ ಅಕ್ಷರಗಳು ನಾಮ ನಕ್ಷತ್ರವನ್ನು ಸೂಚಿಸುವವು, ಇದರಲ್ಲಿ ಶ್ರೀ ರಾಮಾವತಾರ ವಾಯಿತು, ಇದು ಚರನಕ್ಷತ್ರ, ದೇವಗಣ, ಬೆಕ್ಕಿನ ಯೋನಿ, ಇದರಲ್ಲಿ ನಷ್ಟಪ್ರಶ್ನೆ ಕೇಳಿದರೆ ಸಿಕ್ಕೋದಿಲ್ಲವು, ಬಿದರುಮೊಳೆಗೆ ಒಳ್ಳೇದು, ಹೆಂಣು ಮೈನೆರದರೆ ವಳ್ಳೇದಲ್ಲ, ಮದುವೇಪಿನಾ ಶುಭಕರ್ಮಗಳೆಲ್ಲವೂ ಆಗಬಹುದು. ಪ್ರಯಾಣಕ್ಕೂ, ಕ್ಷೌರಕ್ಕೂ, ಮುಂಜೀಗೂ, ವಿ

ದ್ಯೆ ಕಲಿಯುವದಕ್ಕೂ ಬಹಳ ವಳ್ಳೇದು, ಇದರಲ್ಲಿ ಆರಂಭಿಸಿಡ ಕೆಲಸಗಳು ಬೇಗ ನೆರವೇರುತ್ತವೆ, ಜ್ವರ ತಗಿಲಿದರೆ ೭ ದಿನವೇ ಕ್ರೂರ, ಪ್ರಾಣಭಯವಿಲ್ಲ, ಶಾಂತಿ ಮಾಡಿದರೆ ಆರೋಗ್ಯವಾಗುತ್ತೆ, ಅದಿತಿ ದೇವತೆ, ಕಪ್ಪು ಬಂಣವೂ ನಾಲ್ಕು ಕೈಗಳುವುಳ್ಳ ಅದಿತಿ ಪ್ರತಿಮೆಯಂ ಪೂಜಿಸಿ, ಜಪಹೋಮಾದಿಗಳಂ ಮಾಡಿ, ಬೆಲ್ಲದನ್ನ ನೈವೇದ್ಯವಿಟ್ಟು ಬಲಿಹಾಕಿದರೆ ಆರೋಗ್ಯ, ಈ ನಕ್ಷತ್ರದಲ್ಲಿ ತಿಥಿವಾರಗಳ ಶೇರುವಿಕೆಯಿಂದ ಯೋಗಗಳು ಕೂಡಿದರೆ ಯೋಗದ ಹೆಸರಿಗೆ ತಕ್ಕ ಫಲವಹುದು, ಜ್ಯೇಷ್ಠಮಾಸದಲ್ಲಿ ಇದು ಶೂನ್ಯನಕ್ಷತ್ರ, ಇದರಲ್ಲಿ ಉತ್ಪಾತ ಕಾಣಿಸಿದರೆ ಸುಭಿಕ್ಷವಹುದು, ಇಂದ್ರಚಾಪ ಪರಿವೇಷಾದಿಗಳು ಕಾಣಿಸಿದರೆ ಕೂಡ್ಲೆ ಮಳೆ ಬರುತ್ತೆ, ಈ ನಕ್ಷತ್ರದಲ್ಲಿ ಹುಟ್ಟಿದವನು ಧಾರಾಳಿ, ಕೊಂಚಧೊರತನೆ ಬಹಳ ಸಂತೋಷಪಡುವನು ಜಿತೇಂದ್ರಿಯನಾಗಿಯೂ, ಸ್ತ್ರೀ ಲೋಲನಾಗಿಯೂ, ಕೀರ್ತಿವಂತನಾಗಿಯೂ, ವಿದ್ಯಾವಂತನಾಗಿಯೂ, ಸುಖಪಡುವನು, ೧ ನೇ ಪಾದದಲ್ಲಿ ಕಳ್ಳ, ೨ ಭೋಜನಪ್ರಿಯ, ೩ ಬುದ್ಧಿವಂತ, ೪ ಧನವಂತ, ಜನನಕಾಲದಲ್ಲಿ ಗುರು ಮಹಾದಶೆ, ೧೬ ವರುಷ ಅಂತರ್ದಶೆ, ೨೫ ತಿಂಗಳೂ ೧೮ ದಿನಗಳು ಈ ನಕ್ಷತ್ರದವನಿಗೆ ೧—೫—೬—೧೭—೩೩—೫೨ ವರುಷಗಳು ಗಂಡಕಾಲಗಳು, ೩೫ ನೇ ವರುಷ ಯೋಗಕಾಲವು, ೮೦ ನೇ ವರುಷದಲ್ಲಿ ಮಹಾಗಂಡ, ಚಿಕ್ಕಂದಿನಲ್ಲಿ ತಂದೆಗೆ ಕ್ರೂರ, ಪ್ರಾಯ ಬರುತ್ತಲೂ ದೇಶತಿರುಗಿ ಬರುತ್ತಾನೆ. ವೃದ್ಧಾಪ್ಯಕ್ಕೆ ಆರಂಭವಾಗುತಲೂ ಹೆಂಡತಿ ಹೋಗುತ್ತಾಳೆ, ಈ ಜಾತಕನು ಮಾತಾ ಪಿತೃ ಭಕ್ತಿ ಯುಳ್ಳವನಾಗಿರುತ್ತಾನೆ, ೯೬ ವರುಷಗಳು ಪರಮಾಯುಷ್ಯ, ಗ್ರಹಲತ್ತೆಗಳೂ ಗೋಚಾರ ಫಲಗಳೂ, ಜಾತಕಗ್ರಹ ಫಲಗಳೂ, ಅನ್ಯತ್ರ ಹೇಳಲ್ಪಟ್ಟಿರುವ ಪ್ರಕಾರವೇ ನೋಡಿಕೊಳ್ಳಲ್ಪಡತಕ್ಕದ್ದಂದರೆ ಆ ಲೆಕ್ಕ ಪ್ರಕಾರ ಈ ನಕ್ಷತ್ರಕ್ಕೆ ತಕ್ಕ ಲೆಕ್ಕದಿಂದ ತಿಳಿಕೋಬೇಕು. ಇಂತು ಪುನರ್ವಸೂ ವಿಚಾರ ಸಮಾಪ್ತವು. ❋

—*( ಪುಷ್ಯ ನಕ್ಷತ್ರಕ್ಕೆ ೮. )*—

ಶ್ಲೋ। ವೇದಾಭ್ಯಾಸನ ಶಸ್ತ್ರಸಂಗ್ರಹವಿಧಿಶ್ಯಾಸ್ತ್ರಾರ್ಥಶಿಕ್ಷಾದಿಕಂ। ಮಂತ್ರಾರಾಧನ ದೇವತಾರ್ಚನಭಿಷಕ್ಕಾರ್ಯಂ ನೃಪಾಲೋಕನಂ । ಕುರ್ಯಾಚ್ಛಾಂತಿಕ ಪೌಷ್ಟಿಕಾನಿ ನೃಪತೇ ಯಾತ್ರಾಭಿಷೇಕಂತಥಾ । ಪುಷ್ಯರ್ಕ್ಷೇ

ಬಹುಚಿತ್ರವಸ್ತ್ರ ವಿವಿಧಾಲಂಕಾರಯೋಗಾದಿಕಾನ್॥ ಹೂ, ಹೆ, ಹೊ, ಡಾ— ಪುಷ್ಯಮಿ । ಶ್ವೇತವರ್ಣಂ । ತ್ರಿತಾರಾ । ಪುಮಾನ್ । ದೇವಗಣಃ । ಅಜ ಯೋನಿಃ। ಬೃಹಸ್ಪತಿರ್ದೇವತಾ। ಕ್ಷತ್ರಿಯಜಾತಿಃ। ಚತುಷ್ಪಾತ್ । ಊರ್ಧ್ವ ಮುಖೀ । ಅಂಧಕಲೋಚನಂ। ಕ್ಷಿಪ್ರಂ। ಬಾಹ್ಯಂ । ಸಮತಾರಾ । ಸ್ಥಾನಂಗ್ರಾ ಮಃ। ಅಗ್ನಿಮಂಡಲಂ । ಅಶ್ವತ್ಥವೃಕ್ಷಃ । ಪಕ್ಷಿಧಾರಾ । ಅಸ್ಮಿನ್ ನ್ನಕ್ಷತ್ರೇಗು ರುಜಾರ್ತಃ । ವಿಂಶತಿಘಟಿಕಾನಂತರಂ ವಿಷನಾಡ್ಯಶ್ಚತಸ್ರಃ। ಯಾತ್ರಾಯಾಂ ಪರಮಾನ್ನಭೋಜನಂ । ಸರ್ವದಿಕ್ಷುಪ್ರಯಾಣೇಶುಭದಂ । ಜ್ವರೇಸಪ್ತದಿನಾ ನ್ಯರಿಷ್ಟಾನಿ। ಶಾಂತಿಸ್ತು॥ ಪೀತವರ್ಣಂ। ಚತುರ್ಭುಜಂ - ದಂಡಾಕ್ಷಸೂತ್ರಕ ಮಂಡಲಧರಂ। ವರದಾಭಯಪಾಣಿಂ। ಬೃಹಸ್ಪತಿಮಾವಾಹಯೇತ್ । ಪೀತವ ಸ್ತ್ರಂ। ಕುಂಕುಮಗಂಧಃ। ಸರೋರುಹಪುಷ್ಪಂ। ಖಾದಿರಧೂಪಃ। ಮುದ್ಗತಂ ಡುಲಾನ್ನನೈವೇದ್ಯಂ। ಬೃಹಸ್ಪತೇಅತಿ- ಚಿತ್ರಂ। ಇತಿಮಂತ್ರೇಣ ಷೋಡಶೋ ಪಚಾರೈಸ್ಸಂಪೂಜ್ಯ ಪರಮಾನ್ನಂಗಾಯತ್ರ್ಯಾ ಅಷ್ಟೋತ್ತರ ಶತಂಹುತ್ವಾ ಗಂಧಮಾಲ್ಯೈಃ ಕ್ಷೀರೋದನಬಲಿಂಹರೇತ್। ಸಪ್ತಾಹಾತ್ಸುಖೀಭವತಿ॥ ತಿಥಿ ವಾರ ನಕ್ಷತ್ರಯೋಗಃ । ಆದಿವಾರೆ ಸಿದ್ಧಯೋಗಃ । ಸೋಮೆ ಯಮಕಂಟಕ ಯೋಗಃ । ಕುಜೆದಗ್ಧಯೋಗಃ । ಬುಧೆವರಯೋಗಃ । ಗುರೌ ಅಮೃತಸಿದ್ಧ ಯೋಗಃ। ನವಮೀಸಹಿತೆ ವಿಷಯೋಗಃ । ಶುಕ್ರೆ ನಾಶಯೋಗಃ। ಶನೌ ಮೃ ತ್ಯುಯೋಗಃ। ಜ್ಯೇಷ್ಠಾನಕ್ಷತ್ರೆ ಕ್ರೂರಗ್ರಹಸ್ಥಿತೆ ಮಹಾಶೂಲಯೋಗಃ। ವೈ ಶಾಖಮಾಸೆಶೂನ್ಯಂ । ಅಸ್ಮಿನ್ ನುತ್ಪಾತದರ್ಶನೇವೃಷ್ಟಿಃ ಸಂಕ್ರಮಣೇಮಧ್ಯಾ ರ್ಘಃ। ಪ್ರಥಮರಜಸ್ವಲಾಕನ್ಯಾ ಸೌಭಾಗ್ಯ ಪುತ್ರವತೀಭವತಿ । ಪತಿವ್ರತಾಚ ಭವತಿ॥ ಋತು-ಪುಂಸವನ-ಸೀಮಂತ-ನಾಮಕರಣ-ಅನ್ನಪ್ರಾಶನ-ಕರ್ಣವೇಧ- ಚೌಲ- ಉಪನಯನ-ಕ್ಷೌರ- ವೇದಶಾಸ್ತ್ರಾಭ್ಯಾಸ- ತೈಲಾಭ್ಯಂಜನ- ನವವ ಸ್ತ್ರಾಭರಣ- ಅಕ್ಷರಗ್ರಹಣ- ರಾಜಾಭಿಷೇಕ-ಚತುರಂತಯಾನ- ಆಂದೋಳಿ ಕಾ- ಗಜಾಶ್ವಾರೋಹಣ- ವಾಸ್ತುಕರ್ಮ-ಪುರಗ್ರಾಮಾದಿ- ಗೃಹಪ್ರವೇಶ- ಯ ಜ್ಞ-ದೀಕ್ಷಾ- ಗರೂಪದೇಶ-ಶಾಂತಿ-ಪೌಷ್ಟಿಕ-ಮಹೋತ್ಸವ- ನೃತ್ತಗೀತಪರಿಗ್ರ ಹ- ಪಶುಕ್ರಯ-ಕೃತಿಪ್ರಯೋಗ-ಬೀಜಾವಾಪ। ಶ್ರಾದ್ಧಭೈಷಜ್ಯ। ಯಾತ್ರಾದಿ ಶುಭಕಾರ್ಯೇಷುಪ್ರಶಸ್ತಂ। ಪುಷ್ಯರ್ಕ್ಷೇ ಜಾತಸ್ಯಗುಣಾಃ ಸರ್ವಗುಣಸಂಪನ್ನಃ। ಧೀಮಾನ್। ಕ್ಷಿಪ್ರಕ್ರೋಧಃ। ಹಸ್ತಪಾದಯೋಃ ಮತ್ಸ್ಯಾಂಕಿತಃ। ಪ್ರಥಮಪಾ ದಸ್ಯರವಿಃ ಭಾತಾಂಶಃ ಏಕಾಕ್ಷೀ। ಪುತ್ರಕಮಾನ್। ಶೂಲರೋಗೀ। ದ್ವಿತೀಯ

ಪಾದಸ್ಯಸೌಮ್ಯಃ। ನಪುಂಸಕಾಂಶಃ। ಕ್ಲೇಶೀ। ಪರದ್ರವ್ಯಾಪೇಕ್ಷೀ ಪಿಸುನಃ। ತೃತೀಯಪಾದಸ್ಯಶುಕ್ರಃ। ಶೂರಾಂಶಃ। ಪ್ರಸನ್ನವದನಃ। ಮಧುರಭಾಷೀ। ಚತುರ್ಥಪಾದಸ್ಯಕುಜಃ। ದರಿದ್ರಾಂಶಃ। ಪರದ್ರವ್ಯಾಪಹಾರಕಃ ಪುತ್ರವಾನ್। ಅಸ್ಮಿನ್ ಜಾತಸ್ಯಶನಿಮಹಾದಶಾ ಯೇಕೋನವಿಂಶತಿವರ್ಷಾಣಿ। ಅಂತರ್ದಶಾಷಟ್ತ್ರಿಂಶನ್ಮಾಸಾಃ। ಅಷ್ಟಾದಶಮಾಸೇಗಂಡಃ। ತೃತೀಯವರ್ಷೇ ಅಪಮೃತ್ಯುಃ। ಪಂಚಮೇ। ಷೋಡಶೇ। ಸಪ್ತತ್ರಿಂಶದ್ವರ್ಷೇಶಸ್ತ್ರಕಂಟಕಭಯಂ। ಚತುಷ್ಷಷ್ಟಿವರ್ಷೇ ಅಪಮೃತ್ಯುಃ। ತತ್ಪರಿಹಾರೇ ಸತಿಸಪ್ತತಿ ವರ್ಷಾಣೀ ಪರಮಾಯುಃ॥ ಇತಿ ಪುಷ್ಯಮೀ ನಕ್ಷತ್ರ ವಿಚಾರಃ। *

ತಾ॥ ಬಾಣದಂತೆ ೩ ನಕ್ಷತ್ರಗಳು ಕಾಣುತ್ತವೆ. ಅದೇ ಪುಷ್ಯಮೀನಕ್ಷತ್ರವು, ಇದಕ್ಕೆ ಬೃಹಸ್ಪತಿ ದೇವತೆ, ಇದರಲ್ಲಿ ಮಾಡಿದ ಕೆಲಸ ಭಾಗ್ಯ ಆಗುತ್ತೆ, ಮದುವೆಗೆ ಒಳ್ಳೇದಲ್ಲ, ವೈಶಾಖ ಮಾಸದಲ್ಲಿ ಇದು ಶೂನ್ಯನಕ್ಷತ್ರ, ಇದರಲ್ಲಿ ಉತ್ಪಾತ ಹುಟ್ಟಿದರೆ ಮಳೆ ಬರುತ್ತೆ, ಸಂಕ್ರಮಣವಾದರೆ ಧಾರಣೇ ಸಮವಾಗಿರುವದು, ಸ್ತ್ರೀನೆರದವಳು ಪುತ್ರವತಿಯಾಗಿಯೂ ಪತಿವ್ರತೆಯಾಗಿಯೂ ಇರುಳು, ಬಸುರಿಗೆ ಬಳೇ ತೊಡಿಸುವಿಕೆ, ಹೂಮುಡಿಸುವಿಕೆ, ಶೋಭನಪ್ರಸ್ತ, ನಾಮಕರಣ, ಮೊಗುವಿಕೆ ಅನ್ನ ತಿನ್ನಿಸುವಿಕೆ, ಕಿವಿ ಚುಚ್ಚುವಿಕೆ, ಚಂಡಿಕೇ ಬಿಡಿಸುವಿಕೆ, ಹುಟ್ಟುಕೂದಲು ತೆಗಿಸುವಿಕೆ, ಪುಂಜಿ. ಕ್ಷೌರ, ಅಕ್ಷರಾಭ್ಯಾಸ, ವಿದ್ಯಾರಂಭ, ಯಂಣೆ ಮತ್ತಿ ನೀರೆರಕೊಳ್ಳುವಿಕೆ, ಹೊಸಬಟ್ಟೆ ಧರಿಸುವಿಕೆ, ಒಡವೇ ಮಾಡಿಸುವಿಕೆ, ಒಡವೇ ಧರಿಸುವಿಕೆ, ಹೊಸಮನೇ ಕಟ್ಟುವಿಕೆ, ಗೃಹಪ್ರವೇಶ, ಪ್ರಯಾಣ, ವಾಹನವನ್ನು ಇಡೋಣ, ದೀಕ್ಷೆ, ಮಂತ್ರೋಪದೇಶ, ಶಾಂತಿ ಪೌಷ್ಟಿಕ ಕರ್ಮಗಳು, ಭೂಮಿಯಂ ಗೆಯಿದು ಬಿತ್ತುವಿಕೆ ಪಿತೃಶ್ರಾದ್ಧ, ಹೊಸಮಲೇ ಹಾಕುವಿಕೆ, ಮದ್ದು ಮಾಡುವಿಕೆ, ಯಂತ್ರ ತಂತ್ರ ಚಿಕಿತ್ಸೆಗಳು, ಮುಂತಾದ ಕೆಲಸಗಳಿಗೆ ಒಳ್ಳೇದು, ಈ ನಕ್ಷತ್ರದಲ್ಲಿ ಹುಟ್ಟಿದವನು ಪುಣ್ಯವಂತನಾಗಿ ಬದುಕುವನು. ೧ ನೇ ಪಾದದಲ್ಲಿ ಒಳ್ಳೇದಲ್ಲ, ೨—೪ ನೇ ಪಾದ ಒಳ್ಳೇದು, ೩ ನೇ ಪಾದ ಒಳ್ಳೇದಲ್ಲ, ಮೊದಲು ಶನಿದಶೆ, ೫—೧೬—೩೭—೬೪ ನೇ ವರುಷಗಳು ಗಂಡಕಾಲಗಳು, ೭೦ ವರುಷ ಪರಮಾಯುಷ್ಯ. ಇಂತು ಪುಷ್ಯಮೀ ವಿಚಾರವು. *



—*( ಆಶ್ಲೇಷಾ ನಕ್ಷತ್ರಕ್ಕೆ )*—

ಶ್ಲೋ ॥ ಮಂತ್ರಪ್ರಯೋಗಮುಖಚೌರ್ಯಕೃತಾಗ್ನಿಹವ್ಯ ವ್ಯಾಯಾಮ ಶಸ್ತ್ರಶರಕರ್ಮವಿವಾದವಾದಾಃ । ಕುಂತಾಸಿಶಕ್ತಿಶರಕಾರ್ಮುಖಸಂಗ್ರಹಂಚ ಕುರ್ಯಾದ್ದ್ವಿಪಪ್ರಹರಣಾಂ ಖಲುಸಾರ್ಪಭೇತು॥ ಡಿ— ಡೂ— ಡೆ— ಡೊ— ಆಶ್ಲೇಷಾ। ರಕ್ತವರ್ಣಃ । ಷಟ್ತಾರಾ। ಸರ್ಪಫಣಾಕೃತಿಃ । ಸ್ತ್ರೀ । ರಾಕ್ಷಸಗಣಃ । ಮಾರ್ಜಾಲಯೋನಿಃ । ಚತುಷ್ಪಾತ್ । ಅಧೋಮುಖೀ। ಮಂದಲೋಚನಂ। ವಾರುಣಂ। ಬಾಹ್ಯಂ। ಅರ್ಧತಾರಾ। ಸ್ಥಾನಂಶೂನ್ಯಂ। ವರುಣಮಂಡಲಂ। ಪಕ್ಷೀಟಿಟ್ಟಿಭಃ। ಇಕಾರ ಉಕಾರಸ್ವರೌ। ಅಸ್ಮಿನ್‌ಸರ್ಪರಾಜೋಜಾತಃ। ದ್ವಾತ್ರಿಂಶದ್ಘಟಿಕಾನಂತರಂವಿಷನಾಡ್ಯಶ್ಚತಸ್ರಃ । ಯಾತ್ರಾವರ್ಜ್ಯಾ। ಆದೌಚತುರ್ಘಟಿಕಾನಂತರಂಪರಮಾನ್ನಭೋಜನಂ। ಪೂರ್ವೋತ್ತರಪ್ರಯಾಣೇಶುಭದಂ। ಜ್ವರೇಪ್ರಾಣಭಯಂ। ಮಾಸಾರಿಷ್ಟಾ। ಶಚ್ಛಾಂತಿಃ। ಮಧುಪಿಂಗಳವರ್ಣಾ। ವಲ್ಮೀಕಾಸನಸ್ಥಾ ಕುಂಡಲಾಕೃತಿಃ' ಸರ್ಪೋದೇವತಾ । ಪಿಂಗಳವಸ್ತ್ರಂ। ಕುಂಕುಮಗಂಧಃ। ಅಗಸ್ತ್ಯಕುಸುಮಂ। ಘೃತಗುಡಧೂಪಃ। ಪರಮಾನ್ನನೈವೇದ್ಯಂ। ನಮೋಅಸ್ತು ನವ ಃ। ಇತಿಮಂತ್ರೇಣ ಷೋಡಶೋಪಚಾರೈಸ್ಸಂಪೂಜ್ಯಸರ್ಪೇಭ್ಯೋ ದೇವೇ ಭ್ಯೋ ಗಾಯತ್ರ್ಯಾ ಅಷ್ಟೋತ್ತರ ಶತಂಜುತ್ವಾ ಗಂಧಮಾಲ್ಯೈಃ ಪಿಷ್ಟಾಜ್ಯೇನ ಕ್ಷೀರಸಂಯುಕ್ತಂಪೂರ್ವಾಹ್ಣೇ ಪ್ರಾಚ್ಯಾಂಬಲಿಂಹರೇತ್। ಮಾಸಾತ್ಸುಖೀಭವತಿ। ಯೋಗಾಸ್ತು। ಆದಿವಾರೆನಂದಯೋಗಃ। ಇಂದಾವಿಷಯೋಗಃ। ಕುಜೆ ನಂದಾಯಾಂವರಯೋಗಃ । ಬುಧೆ ಯಮಕಂಟಯೋಗಃ। ಗುರಾಸಿದ್ಧಯೋಗಃ ಶನೌ ಮೃತ್ಯುಯೋಗಃ। ಧನಿಷ್ಟಾನಕ್ಷತ್ರೆ ಕ್ರೂರಗೃಹಸ್ಥಿತೇಮಹಾಶೂಲಯೋಗಃ। ಆಶ್ವೀಜಮಾಸಶೂನ್ಯಂ। ಸರ್ಪಾಪಶಮೃತ್ಯೈ। ಅಸ್ಮಿನ್‌ನಕ್ಷತ್ರೆ ಉತ್ಪಾತದರ್ಶನೆಧಾನ್ಯಕ್ಷೀರಸಮೃದ್ಧಿರ್ಭವತಿ। ಮಧ್ಯಾಹ್ನೇರಕ್ತಮೇಘದರ್ಶನೆ। ಇಂದ್ರಚಾಪಪರಿವೇಷದರ್ಶನೇವೃಷ್ಟಿಃ। ಸಂಕ್ರಮೆಮಧ್ಯಾರ್ಘಃ। ಪ್ರಥಮರಜಸ್ವಲಾಕನ್ಯಾಪತಿಹಿಂಸಾಭವತಿ। ದರಿದ್ರಿಣೀಭವತಿ। ಅಗ್ನಿಪಾತವಿಷಪ್ರಯೋಗ। ಚೋರ। ರಿಪು। ಚಂದನ। ಅನೃತವಾದಿ। ಮಾಯಾಪ್ರಯೋಗ। ಶಸ್ತ್ರಪ್ರಯೋಗಃ। ವಾಪಿಕೂಪತಟಾಕಾದಿಕಾರ್ಯೇಷುಪ್ರಶಸ್ತಾ। ಅಸ್ಮಿನ್‌ನಕ್ಷತ್ರೇಜಾತಸ್ಯಗುಣಾಃ। ಅತಿಕುತ್ಸಿತಃ। ಜಾಲಕಃ । ಸ್ವಾಮಿಕಾರ್ಯೇಷುಮಂದಗತಿಃ। ವಿಶಾಲಾಕ್ಷಃ। ನೇತ್ರೇಷುಮತ್ತಾನ್ಯಂಕಿತಃ। ಪ್ರಥಮಪಾದಸ್ಯಗುರುಃ। ಉತ್ಕೃಷ್ಟಾಂಶಃ—ಶತ್ರುನಾಶಃ। ಬಹುಕಾರ್ಯವಾನ್ । ದ್ವಿತೀಯಪಾದಸ್ಯಮಂದಃ—

ಶಿಥಿಲಾಂಶಃ—ಮಂದಬುದ್ಧಿಃ—ಚಪಲಃ—ನೀಚಕಾರ್ಯಃ ತೃತೀಯಪಾದಸ್ಯ ಮಂದಃ— ಉಗ್ರಾಂಶಃ। ದುರ್ಮತಿಃ—ಘಾತುಕಃ— ನೀಚಃ— ಅಲ್ಪಸ್ನೇಹಃ—ಚತುರ್ಥಪಾದಸ್ಯಗುರುಃ— ಪಂಡಿತಾಂಶಃ—ಜ್ಞಾನವಾನ್ ಮೃದುಭಾಷೀ—ಅಜಾತಶತ್ರುಃ— ಬಹುಕ್ಲೇಶಃ—ಉದ್ಯೋಗವಾನ್—ದ್ವಿತೀಯಪಾದೆ ಮಾತೃಗಂಡಃ—ತೃತೀಯಪಾದೆ—ಧನಗಂಡಃ,ಚತುರ್ಥಪಾದೆಪಿತೃಗಂಡಃ।ಅಂತ್ಯಾಘಟಿಕಾಯಾಂ ಅಭುಕ್ತಗಂಡಃ। ಅಸ್ಮಿನ್‌ಜಾತಸ್ಯಬುಧಮಹಾದಶಾಸಪ್ತದಶವರ್ಷಾಣಿ—ಅಂತರ್ದಶಾ ಅಷ್ಟಾವಿಂಶತಿಮಾಸಃ । ಸಪ್ತವಿಂಶತಿದಿನಾನಿ । ಪ್ರಥಮವರ್ಷೆಚತುಷ್ಪಾದಗಂಡಃ । ಪಂಚಮವರ್ಷೆಅಪಮೃತ್ಯುಃ । ಅಷ್ಟಮೆ— ಏಕಾದಶವರ್ಷೆಚ ಮಹಾಕ್ಲೇಶಃ— ಪಂಚವಿಂಶತಿ— ಸಪ್ತವಿಂಶತಿವರ್ಷೇವಾಅಪಮೃತ್ಯುಃ। ತ್ರಿಂಶದ್ವರ್ಷೆದೇಶಭ್ರಮಣಂ। ದ್ವಿಪಂಚಾಶದ್ವರ್ಷೆಅಪಮೃತ್ಯುಃ । ತತ್ಪರಿಹಾರೆಸತಿ ನವಾಶೀತಿವರ್ಷಾಣಿಪರಮಾಯುಃ॥ ಇತ್ಯಾಶ್ಲೇಷಾವಿಚಾರಃ॥ ೯॥

ತಾತ್ಪರ್ಯ॥ ಹಾವಿನ ಹಾಗಿರುವ ೬ ಚುಕ್ಕೆಗಳು ಆಶ್ಲೇಷೆ, ಇದಕ್ಕೆ ಸರ್ಪಗಳು ದೇವತೆ, ಇದರಲ್ಲಿಪ್ರಯಾಣ ಮಾಡ ಕೂಡದು. ಮೈನೆರಡರೆ ಗಂಡನಿಗೂ ಅತ್ತೆಗೂ ಒಳ್ಳೇದಲ್ಲ, ಇದರಲ್ಲಿ ಹುಟ್ಟಿದವರಿಗೆ ಅತ್ತೇ ವಿಷಗಂಡ—ನಾಲ್ಕನೇ ಪಾದದ ಕೊನೇಲಿ ಅಭುಕ್ತ । ಘುಳಿಗೆ ೪ ಬಿಡತಕ್ಕದ್ದು. ಈ ನಕ್ಷತ್ರವು ನಾಗಪ್ರತಿಷ್ಠೆ, ಸರ್ಪಸಂಸ್ಕಾರ— ವಿಷಪ್ರಯೋಗ—ಕಳವುದ್ವೇಷ—ಹಗೆ ತೀರಿಸಿಕೊಳ್ಳುವಿಕೆ— ಅಗ್ನಿಸ್ತಂಭ— ಗಂಧದೆಂಣೆ ತೆಗೆಯುವಿಕೆ— ಗಾಣವನ್ನು ನಡಿಸುವಿಕೆ— ಕೋಳವನ್ನು ನೆಡಿಸುವಿಕೆ— ಜಾಲವಿದ್ಯೇ ಕಲಿಯುವಿಕೆ—ಕೂಟಕೃತ್ಯಾ ನಡಸುವಿಕೆ—ಸುಳ್ಳುನುಡಿಯುವಿಕೆ—ಕಲ್ಪನೇ—ಭಾವಿಮಾತೋಡಿಸೋಣ— ಕೆರೇ ಕಟ್ಟೋಣ—ಗರುಡೋಸಾಧನೆ— ಗಾರುಡವಿದ್ಯೆ— ಮಾಂಸವಿಕ್ರಯವ್ಯಾಪಾರ—ಕಲ್ಲಿಗೆ ಸುರಂಗಹತ್ತಿಸೋಣ— ಹಗ್ಗಹೊಸಿಯೋಣ— ಹತ್ತಿಯನ್ನು ನೂಲೋಣ ಹುಳಗಳನ್ನು ಬೆಳಸೋಣ—ಈ ಕೆಲಸಗಳಿಗೆ ಒಳ್ಳೇದು, ಇದರಲ್ಲಿ ಶುಭಕಾರ್ಯಕೂಡದು, ಇದು ದಾರುಣಫಲಕೊಡುತ್ತೆ. ಇದರಲ್ಲಿಹುಟ್ಟಿದವನು ಲಕ್ಷ್ಮಣನು. ಈ ಜಾತಕ ವಿದ್ಯಾಬುದ್ಧಿ ಬಲಗಳುಳ್ಳವ—ತಂತ್ರಗಾರ ಕಷ್ಟ ಸುಖಮಿಶ್ರ ೧—೫—೮—೧೧—೨೫—೨೭—೩೦—೫೦ನೇ ವರುಷಗಳು ಗಂಡಕಾಲಗಳು. ಇವನಿಗೆ ಪಶುಗಂಡ,ಸರ್ಪಗಂಡ, ೮೯ ವರುಷಗಳು ಪರಮಾಯುಷ್ಯ, ಜ್ವರ ಬಂದರೆ ೧ ತಿಂಗಳು ವೇಧೆ. ಬೃಹಸ್ಪತಿ ಶಾಂತಿ ಮಾಡಿದರೆ ಆರೋಗ್ಯವಾದೀತು. ಇಂತು ಆಶ್ಲೇಷಾ ವಿಚಾರವು. *

## ಮಖಾ ನಕ್ಷತ್ರಕ್ಕೆ ೧೦.

ಶ್ಲೋ ॥ ಕಾಂಸ್ಯಾದಾನಂ ಸರ್ವಮಂತ್ರಪ್ರಯೋಗಂ ಕುರ್ಯಾಛ್ರಾದ್ಧಂ ತರ್ಪಣಂವಾಪಿತೄಣಾಂ। ದ್ಯೂತಾರಂಭಂಷುವ್ಯಕವ್ಯಾದಿಕರ್ಮವೈದ್ಯಂಚಾದ್ಯಂ ಸಂಹತೆಚಾಪಿಕರ್ಮ ॥ ಪೂ—ಪಿ—ಮೂ—ಮೆ—ಮಖ। ಪಂಚತಾರಾ। ಕೃಷ್ಣವರ್ಣಃ। ಅಂದೋಳಿಕಾದಂಡಾಕೃತಿಃ। ಸ್ತ್ರೀ। ಪಿತೃದೇವತಾ। ಯೋನಿರ್ಗ್ರಾಮಷಕಃ। ರಾಕ್ಷಸಗಣಃ। ಶೂದ್ರಜಾತಿಃ। ಚತುಷ್ಪಾತ್। ಅಧೋಮುಖಿ। ಮಧ್ಯಲೋಚನಂ। ಉಗ್ರತಾರಾ। ಅಂತಸ್ಸಮತಾರಾ। ಸ್ಥಾನಂಪಟ್ಟಣಂ। ಅಗ್ನಿಮಂಡಲಂ। ವಟವೃಕ್ಷಃ। ಪಕ್ಷೀಕುಕ್ಕುಟಃ। ಅಕಾರಸ್ವರಃ। ಅಧಮಜಾತಿಃ। ತ್ರಿಂಶದ್ಘುಟಿಕಾನಂತರಂ ವಿಷನಾಡ್ಯಶ್ಚತಸ್ರಃ। ಯಾತ್ರಾಪರ್ಜ್ಯ। ಆದೌ ಏಕಾದಶಘುಟಿಕಾನಂತರಂ ತಿಲತಂಡುಲಭಕ್ಷ್ಯಂ। ದಕ್ಷಿಣಪಶ್ಚಿಮಪ್ರಯಾಣೆಶುಭದಂ। ಜ್ವರೆಪ್ರಾಣಭಯಂ। ಅಥವಾ ವಿಂಶತಿದಿನಾನ್ಯರಿಷ್ಟಾನಿ। ತಚ್ಛಾಂತಿಃ। ಕೃಷ್ಣವರ್ಣಂ। ಚತುರ್ಭುಜಂ। ಸಾಕ್ಷಸೂತ್ರಕಮಂಡಲಧರಂ। ವರದಾಭಯಪಾಣಿಂ। ಯಮಪ್ರತಿಮಾಯಾಂ ಯಮಮಾವಾಹಯೇತ್। ಕೃಷ್ಣವಸ್ತ್ರಂ। ಅಗರುಗಂಧಃ। ಚಂಪಕಪುಷ್ಪಂ। ಘೃತಗುಡಾನ್ನನೈವೇದ್ಯಂ। ಮಂತ್ರಸ್ತು। ಉದೀರಿತಾ= ಹವೇಷು। ಇತಿಮಂತ್ರೇಣ ಷೋಡಶೋಪಚಾರೈ ಸ್ಸಂಪೂಜ್ಯ। ತಿಲತಂಡುಲ ಮಿಶ್ರಿತಾಜ್ಯೇನ ಗಾಯತ್ರ್ಯಾಷ್ಟೋತ್ತರಶತಂಹುತ್ವಾ। ಗಂಧಮಾಲ್ಯೈಸ್ತಿಲೋದನಂದಕ್ಷಿಣಭಾಗೆ ಬಲಿಂದತ್ವಾ ಕೃಷ್ಣಧೇನುಂ ದದ್ಯಾತ್ ಸುಖೀಭವತಿ॥ ಯೋಗಾಃ। ಆದಿವಾರೆದಗ್ಧಯೋಗಃ। ಸೋಮೆಮೃತ್ಯುಯೋಗಃ। ಕುಜೆಶುಭಯೋಗಃ। ಬುಧೆವರಯೋಗಃ। ಗುರೌಸಿದ್ಧಯೋಗಃ। ಶುಕ್ರೆರೌದ್ರಯೋಗಃ। ಶನೌವಿಷಯೋಗಃ। ರಿಕ್ತಾಯಾಂನಿರ್ಜೀವಯೋಗಃ। ಪಂಚಮ್ಯಾಂಜ್ವಾಲಾಮುಖೀಯೋಗಃ। ಶ್ರವಣನಕ್ಷತ್ರಕ್ರೂರಗ್ರಹಸ್ಥಿತೆ ಮಹಾಶೂಲಯೋಗಃ। ಕಾರ್ತಿಕಮಾಸೆಶೂನ್ಯಂ। ಅಸ್ಮಿನ್ನಕ್ಷತ್ರೆ ಉತ್ಪಾತದರ್ಶನೇ ದುರ್ಭಿಕ್ಷಾಗ್ನಿಭಯಂ। ಸಂಕ್ರಮೆಮಧ್ಯಾರ್ಘಃ। ಪ್ರಥಮರಜಸ್ವಲಾ ಕನ್ಯಾ ದುಶ್ಶೀಲಾಶೋಕೋಭವತಿ। ಮೃತಪುತ್ರಾಭವತಿ। ಸಮಾವರ್ತನ। ವಿವಾಹ। ಸರ್ವಮಂತ್ರಪ್ರಯೋಗ। ದಾಸೀಭೃತ್ಯಸಂಗ್ರಹ। ಕ್ರಯವಿಕ್ರಯಪ್ರಾರಂಭ। ಬೀಜಾವಾಪ। ಕೂಪಾರಂಭ। ನಿಕ್ಷೇಪಾಂಜನ। ಧನಪ್ರಯೋಗ। ವಾಪೀಕೂಪತಟಾಕಾದಿಪ್ರಾರಂಭ। ಪಿತೃಕರ್ಮಾದಿಕಾರ್ಯೇಷುಪ್ರಶಸ್ತಾ॥ ಅಸ್ಮಿನ್ನಕ್ಷತ್ರೆ ಜಾತಸ್ಯಗುಣಾಃ। ವಿದ್ಯಾಪ್ರಿಯಃ। ವಿನಯಗಂಭೀರಪ್ರಿಯಃ। ದೀರ್ಘಾಯುಃ

ಧನಾರ್ಜನಕಾರ್ಯನಿಪುಣಃ । ಬಂಧುವರ್ಗೋಪಕಾರೀ । ಪಿತೃಮಾತೃಭಕ್ತಃ। ಬಹುಗುಣಯುತಃ। ಸ್ಪಷ್ಟಭಾಷೀ । ರಿಪುಗಣವಶೀಕರಃ। ಕ್ಷಿಪ್ರರೋಗೀ। ಸ್ವಪ್ರಿಯಃ। ರಕ್ತಲೋಚನಃ। ಹೃದಯೇಮತ್ಸ್ಯಾಂಕಿತಃ। ಪ್ರಥಮಪಾದಸ್ಯಕುಜಃ। ತಸ್ಕರಾಂಶಃ। ಅನ್ಯಾಯಕರಃ। ಏಕಾಂತಪ್ರಿಯಃ। ಕರ್ಣರೋಗೀ। ಸಂಗ್ರಾಮವಿಜಯಃ। ದ್ವಿತೀಯಪಾದಸ್ಯಶುಕ್ರಃ । ಧನವಾನ್। ದೀರ್ಘಾಯುಃ। ಬಹುಪುತ್ರವಾನ್। ಬಹುಶ್ರುತಃ। ತೃತೀಯಪಾದಸ್ಯಬುಧಃ। ಪಂಡಿತಾಂಶಃ। ವಿಚಕ್ಷಣಃ। ನಿಪುಣಃ। ಜ್ಞಾನವಾನ್। ಸತ್ಯವಾದೀ ಬಹುಪುತ್ರವಾನ್। ಮಂತ್ರಜ್ಞಃ। ಸ್ಥಿರಾಯುಃ। ಚತುರ್ಥಪಾದಸ್ಯಚಂದ್ರಃ। ಅರ್ಥಾಂಶಃ। ಸ್ತ್ರೀಪೋಷ್ಯಃ। ದಂತರೋಗಿ। ದೇವಬ್ರಾಹ್ಮಣಪೂಜಕಃ। ಕೃತಿಮಾನ್। ಕಾರ್ಯದಕ್ಷಃ । ಅಸ್ಮಿನ್ನಕ್ಷತ್ರೆಜಾತಸ್ಯ ಕೇತುಮಹಾದಶಾವರ್ಷಾಣಿಸಪ್ತ। ಅಂತರಾಣಿ। ಚತುರ್ಮಾಸಾಸ್ಸಪ್ತವಿಂಶತಿದಿನಾನಿ। ಅಷ್ಟಾದಶಮಾಸೆದ್ವಾದಶವರ್ಷೆವಾ ಶಸ್ತ್ರಭಯಂ। ತ್ರಯಸ್ತ್ರಿಂಶದ್ವರ್ಷೇ ಗುಲ್ಮಾಗ್ನಿಭಯಂ। ಷಷ್ಟಿವರ್ಷೆ। ಚತುರಶೀತಿವರ್ಷೇವಾಜ್ವರಭಯಂ । ಅತ್ಯಂತರೋಗೋವ್ಯಾಘ್ರೋವಾ ವಾಯುರ್ವಾ ಅಪಮೃತ್ಯುಃ। ಅಸ್ಮಿನ್ಪರಿಹೃತೆ ಸಪ್ತಾಶೀತಿವರ್ಷಾಣಿಪರಮಾಯುಃ । ಇತಿ ಮಖಾನಕ್ಷತ್ರವಿಚಾರಃ। *

ತಾತ್ಪರ್ಯ । ಪಾಲಕ್ಕೀ ಕೊಂಬಿನ ಹಾಗಿರುವಂಥಾ ೫ ಚುಕ್ಕೆಗಳು ಮಖಾನಕ್ಷತ್ರವು, ಇದು ಉಗ್ರಫಲಕೊಡುತ್ತೆ. ಇದಕ್ಕೆ ಪಿತೃಗಳು ದೇವತೆ, ಇದರಲ್ಲಿ ರೋಗತಗಲಿದರೆ ಕ್ರೂರ, ಶಾಂತಿಮಾಡಿದರೆ ಆರೋಗ್ಯ, ಮೈನೆರದರೆ ಮುಂಡೆಯಾಗಿ ಮಕ್ಕಳಿಲ್ಲದೆ ದುಃಖಪಟ್ಟಾಳು, ೬ ತಿಂಗಳು ಪ್ರಸ್ತಮಾಡದೇ ಬಿಟ್ಟು ಶಾಂತಿ ಮಾಡಿ ಬಳಿಕ ಪ್ರಸ್ತ ಬೆಳಸಿದರೆ ಕ್ಷೇಮ, ಇದರಲ್ಲಿ ಮದುವೇ ಆಗಬಹುದು, ಇನ್ನು ಯಾವಶುಭಕಾರ್ಯಗಳನ್ನು ಮಾಡಕೂಡದು, ಕಾಲಪ್ರಾಪ್ತವಾದ ಶುಭಕರ್ಮಗಳು ಆಗಬಹುದು, ಸಕಲಮಂತ್ರ ತಂತ್ರ ಮಾಟಗಳಿಗೂ ಅನುಕೂಲ, ಚಾಕರಿಗೆ ಆಳುಗಳನ್ನು ಇರಿಸಿಕೋಬಹುದು, ಶಿಲ್ಪ ಕೆಲಸ ನಡಸಬಹುದು, ಗಿಡ ಕಡಿಯುವಿಕೆ, ನೆಲ ಅಗಿಯುವಿಕೆ, ಕಲ್ಲುವಡೆಯುವಿಕೆ, ರಸ ಅರಯುವಿಕೆ, ಹೆಂಡ ಇಳಿಸುವಿಕೆ, ಬೆಲ್ಲ ಕಾಯಿಸುವಿಕೆ, ಹರಳು ಬೇಯಿಸುವಿಕೆ, ಬಿತ್ತುವಿಕೆ, ಭಾವಿ ತೋಡೋಣ, ಹಗೇವು ತೆಗಿಯೋಣ, ನಿಕ್ಷೇಪಕೀಳೋಣ, ಅಂಜನ ಹಾಕೋಣ, ಮೊದಲು ಚಿಕಿತ್ಸೇ ಮಾಡೋಣ, ಸಾಲ ಕೊಡೋಣ, ಬಡ್ಡಿ ತಕ್ಕೊಳ್ಳೋಣ, ಅರಳೆ, ಕಂಬಳಿ, ಕಬ್ಬಿಣ, ಆಯುಧ, ಇಟಿಗೆ, ಕಲ್ಲು ಇವುಗಳನ್ನುಕೊಂಡು ಮಾರುವ ವ್ಯಾಪಾರ, ಪ್ರೇತಸಂಸ್ಕಾರಮುಂ

ತಾವ ಕೆಲಸಗಳಿಗೆ ಒಳ್ಳೇದು, ಈ ನಕ್ಷತ್ರಜಾತಕನು, ಬಲವಂತ, ಬುದ್ಧಿವಂತ ಅದೃಷ್ಟಶಾಲಿ, ಧನವಂತ, ಮಕ್ಕಳೊಂದಿಗೆ, ಬಳಗವುಳ್ಳವ, ನೆಂಟರುಳ್ಳವ, ಬಹಳ ಆಸೆಗಾರ, ಲೋಭಿ, ಧನಸಂಪಾದಿಸುತ್ತಾನೆ, ರೋಗ ಬಂದು ಹೋಗುತ್ತಿರುವದು. ೧ನೇ ಪಾದಕ್ಕೆ ಫಲ ವಿದ್ವತ್ಪ್ರಿಯ, ೨ಕ್ಕೆ ಜಯವುಂಟು, ೩ಕ್ಕೆ ಜ್ಞಾನಾಧಿಕ, ೪ಕ್ಕೆ ಭೋಗಾದಿಕ, ಈನಕ್ಷತ್ರದವರು ಕಪಟಚಿತ್ತರು, ಪ್ರಬಲಿಸುತ್ತಾರೆ, ಹಠವಾದಿಗಳು, ತಂತ್ರ ನಡಿಸುತ್ತಾರೆ, ಹಾವುಗಳನ್ನು ಗೆದ್ದಾರು, ಅಂತರಂಗ ಭಯಶೀಲರು, ಕಾಮಾಸಕ್ತರು, ಕಡೆಗೆ ವಿರಕ್ತರು,ಬಡತನದಂತೆ ವ್ಯಸನಗಳು ೧೨—೧೮—೩೩—೬೦—೮೪ ಇವು ಗಂಡಕಾಲಗಳು, ೮೭ ವರುಷಗಳು ಪರಮಾಯುಷ್ಯ. ಇತಿ ಮಘಾವಿಚಾರವು. *

---

## ಪೂರ್ವಫಲ್ಗುನೀ ನಕ್ಷತ್ರಕ್ಕೆ ೧೧.

ಶ್ಲೋ॥ ಪುರಪ್ರಭೇದಾನಗಭೀಮಖಾತಂ ವಿಷಪ್ರಯೋಗಂಭಯರೋಗದುಃಖಂ । ಮಂತ್ರೌಷಧೀಕಾಷ್ಠಚಾಕಪಾಪಿ ಭಾರ್ಗ್ಯಕ್ಷಕೇಚಾರಿ ಭಯಂ ವಿದಧ್ಯಾತ್ ॥ ಮೊ—ಟಾ—ಟೀ—ಟು—ಪುಬ್ಬ— ದ್ವಿತಾರಾ । ಶ್ವೇತವರ್ಣಃ। ದಂಡಾಕೃತಿಃ । ಸ್ತ್ರೀಲಿಂಗಂ। ಅಧೋಮುಖಂ। ಮಾನುಷಗಣಃ। ಯೋನಿರಾಹುಃ । ಭಗದೇವತಾ । ವಿಪ್ರಜಾತಿಃ । ಚತುಷ್ಪಾತ್ । ಸುಲೋಚನಂ । ಉಗ್ರಃ । ಸಮತಾರಾ । ಸ್ಥಾನಂಗ್ರಾಮಃ । ಅಗ್ನಿಮಂಡಲಂ । ಪಾಲಾಶ ವೃಕ್ಷಃ । ಪಕ್ಷೀಗೃಧ್ರಃ । ಏಕಾರಸ್ವರಃ । ವಿಂಶತಿ ಘಟಿಕಾನಂತರಂ ವಿಷನಾಡ್ಯಶ್ಚತಸ್ರಃ। ಯಾತ್ರಾವರ್ಜ್ಯಾ। ಆದೌಷೋಡಶ ಘಟಿಕಾನಂತರಂ ಶಾಕೋದನಂ ಭಕ್ಷಯಿತ್ವಾ। ದಕ್ಷಿಣಪಶ್ಚಿಮಪ್ರಯಾಣೇಶುಭಂ । ಜ್ವರೆ ಪ್ರಾಣಭಯಂಭವತಿ। ಅಥವಾಮಾಸಾರಿಷ್ಟಂ। ತಚ್ಛಾಂತಿಃ। ರಕ್ತವರ್ಣಾಂ। ದ್ವಿಭುಜಾಂ ಕಮಲಾಭಯಹಸ್ತಾಂ। ಕಮಲಾಸನಸಾಂ । ಭಗದೇವತಾಂ । ತತ್ಪ್ರತಿಮಾಯಾಮಾವಾಹಯೇತ್। ರಕ್ತವಸ್ತ್ರಂ। ರಕ್ತಚಂದನಗಂಧಃ। ರಕ್ತಕರವೀರಪುಷ್ಪಂ ಬಿಲ್ವಧೂಪಃ । ಕೃಸರಾನ್ನನೈವೇದ್ಯಂ ॥ ಮಂತ್ರಃ । ಭಗಪ್ರಣೇತ— ದನ್ನಃ। ಪೂರ್ವೋತ್ತರಫಲ್ಗುನ್ಯೋ ರೇಕನಕ್ಷತ್ರ ತಾಸ್ವಗಾರ್ಯಮದೇವತಾಕತ್ವೇಪಿ ಸ್ಮಾರ್ತಕರ್ಮಣಿಭಗೋದೇವತಾಶ್ರೌತೆ ಕರ್ಮಣ್ಯಾರ್ಯಮದೇವತೇತಿ ಶ್ರುತಿಸ್ಮೃತಿ ವಿವೇಕಃ ತಸ್ಯಮಂತ್ರೇಣ ಷೋಡಶೋಪಚಾರೈಃ ಸಂಪೂಜ್ಯ ಆಜ್ಯೇನ ಗಾಯತ್ರ್ಯಾ

ಅಷ್ಟೋತ್ತರಶತಂಹುತ್ವಾ ಗಂಧಮಾಲ್ಯೈಶ್ಚ। ಪ್ರಿಯಂಗ್ವೋದನಬಲಿಂಹರೇತ್ ರಕ್ತಧೇನುಂದದ್ಯಾತ್। ಮಾಸಾತ್ಸುಖೀಭವತಿ॥ಯೋಗಾಸ್ತು। ಆದಿವಾರೆ ವಿಷಯೋಗಃ। ಸೋಮೇನಾಶಯೋಗಃ। ಕುಜೆಶುಭಯೋಗಃ।ಬುಧೇವರಯೋಗಃ। ಗುರೌಮೃತ್ಯುಯೋಗಃ । ಶುಕ್ರೇಸಿದ್ಧಯೋಗಃ । ಶನೌನಾಶಯೋಗಃ । ತ್ರಯೋದಶಿಸಹಿತೆ ಉಗ್ರಯೋಗಃ। ಭದ್ರಾಯಾಂನಿರ್ಜೀವಯೋಗಃ। ಆಷಾಢಮಾಸೆ ಶೂನ್ಯಂ । ಅಶ್ವಿನ್ಯಾಂಕ್ರೂರಗ್ರಹಸ್ಥಿತೆ ಮಹಾಶೂಲಯೋಗಃ। ಅಸ್ಮಿನ್ನುತ್ಪಾತದರ್ಶನೇದುರ್ಭಿಕ್ಷಂಭವತಿ। ಇಂದ್ರಚಾಪಪರಿವೇಷದೃಷ್ಟೌವೃಷ್ಟಿಃ।ಸಂಕ್ರಮೇಮಹಾರ್ಘ್ಯಃ। ಪ್ರಥಮರಜಸ್ವಲಾಕನ್ಯಾಪತಿ । ಸುತಹೀನಾಭವತಿ। ಮಾಯಾವಾದ। ದ್ರವಿಣಶಾಂತಿ। ಶಂಶಾಸ್ತ್ರಾಭ್ಯಾಸ। ಮಂತ್ರಪ್ರಯೋಗ। ಚೋರಗಮನ। ದ್ಯೂತ। ಮದ್ಯಪಾನ। ಶತ್ರೂಚ್ಚಾಟನ। ನಿಕ್ಷೇಪ। ಜಲಪ್ರಯೋಗ। ವಾಪೀಕೂಪತಟಾಕಸ್ಥಾಪನ। ವಿಷಾಗ್ನಿಪ್ರಯೋಗ। ಇತ್ಯಾತ್ಯುಗ್ರಕಾರ್ಯೇಷು ಪ್ರಶಸ್ತಾ। ಅಸ್ಮಿನ್ಜಾತಸ್ಯಗುಣಾಃ। ರೂಪವಾನ್। ದಾತಾ। ಅನುಜಪ್ರಿಯಃ। ಮೃದುಕರಚರಣಃ। ರಾಜಾಂಶಃ। ಕ್ರಯವಿಕ್ರಯನಿಪುಣಃ। ಚಂಚಲಾಕ್ಷಃ।ಆಲಸ್ಯವಾನ್। ಲಕ್ಷಣಸಂಪನ್ನಃ। ರಾಜಪೂಜಃ। ಪ್ರಥಮಪಾದಸ್ಯರವಿಃ। ರಾಜಾಂಶಃ। ಸರ್ವಗುಣಸಂಪನ್ನಃ। ಭೋಗವಾನ್। ಬಹುಪುತ್ರವಾನ್ । ತ್ಯಾಗೀ। ದ್ವಿತೀಯಪಾದಸ್ಯಬುಧಃ। ನಪುಂಸಕಾಂಶಃ। ಖ್ಯಾತಿಮಾನ್। ಉತ್ಸಾಹವಿಭವಃ। ಮನಃಕ್ಲೇಶೀ। ಸ್ತ್ರೀದ್ವೇಷೀ। ತೃತೀಯಪಾದಸ್ಯಶುಕ್ರಃ । ಅಭಯಾಂಶಃ। ಬಂಧುಪ್ರಿಯಃ। ಶಿಲ್ಪಶಾಸ್ತ್ರವಿತ್। ಗಣಿತಜ್ಞಃ। ದಾನವಾನ್। ಚತುರ್ಥಪಾದಸ್ಯಕುಜಃ। ದರಿದ್ರಾಂಶಃ। ಕ್ಲೇಶಿ। ದನಧಾನ್ಯದೂರಃ। ಫಲಕಾಲಪರಿತ್ಯಾಗೀ। ಅಸ್ಮಿನ್ಜಾತಸ್ಯ ಭೃಗೋರ್ಮಹಾದಶಾ ವಿಂಶತಿವರ್ಷಾಣಿ। ಅಂತರ್ದಶಾಚತ್ವಾರಿಂಶನ್ಮಾಸಾಃ। ಷಣ್ಮಾಸ ಪರಿಯಂತಂ ವಿಷಗಂಡಾಂಶಃ। ಪಂಚಮವರ್ಷೇ ಮಹಾಭಯಂ। ಅಥವಾಮೂತ್ರರೋಗಃ। ಸಪ್ತಮವರ್ಷೇಭಯಂ। ನವಮವರ್ಷೇಮೃತ್ಯಾದಿಭಯಂ। ಅಥವಾಶಸ್ತ್ರಭಯಂ। ದ್ವಾದಶವರ್ಷೇ ಅಂತ್ಯಜಾತಿಭಯಂ। ಅಥವಾ ಜ್ವರಭಯಂ। ಚತ್ವಾರಿಂಶದವರ್ಷೇ ಉಗ್ರರೋಗಃ।ಪಂಚಾಶದ್ವರ್ಷೇ ಪ್ರತಿಕೂಲಭಯಂ।ಅಷ್ಟಷಷ್ಟಿವರ್ಷೇ ಅಪಮೃತ್ಯುಃ। ತತ್ಪರಿಹಾರೇಸತಿನವಾಸೀತಿವರ್ಷಾಣಿ ಪರಮಾಯುಃ। ಇತಿ ಫಲ್ಗುನೀ ನಕ್ಷತ್ರವಿಚಾರಃ॥ ೧೦॥ *

ತಾತ್ಪರ್ಯ॥ ಹುಬ್ಬೆ ಉತ್ತರೇ ಈ ಎರಡು ನಕ್ಷತ್ರಗಳಿಗೂ ಎರಡೆರಡು ಚುಕ್ಕೆಗಳು ಸೇರಿ ಚೌಕವಾಗಿ ನಾಲ್ಕು ಚುಕ್ಕೆಗಳು ಫಲ್ಗುನೀ ನಕ್ಷತ್ರವೆನಿಸುವದು.

ಇದಕ್ಕೆ ಸೂರ್ಯನಭಗ ಮೂರ್ತಿಯೂ, ಅರ್ಯಮಮೂರ್ತಿಯೂ ದೇವತೆಗಳು. ಪೂರ್ವಭಾಗ ಹುಬ್ಬೆ ಅದಕ್ಕೆ ಭಗದೇವತೆ, ಉತ್ತರ ಫಲ್ಗುನಿಗೆ ಅರ್ಯಮ ದೇವತೆಯೆಂದು ಸ್ಮೃತ್ಯುಕ್ತವಾಗಿಧೆ. ವೇದದಲ್ಲಿ ಪೂರ್ವ ಫಲ್ಗುನಿಗೆ ಅರ್ಯಮ ದೇವತೆಯೆಂತಲೂ, ಉತ್ತರ ಫಲ್ಗುನಿಗೆ ಭಗದೇವತೆ ಯೆಂತಲೂ ಹೇಳಲ್ಪಟ್ಟಿಧೆ. ಹೀಗೆ ಶ್ರುತಿ ಸ್ಮೃತಿಗಳಿಗೆ ವಿರೋಧ ತೋರಿದರಿಂದ ಶ್ರುತಿಗೆ ಪ್ರಾಬಲ್ಯವೆಂದು ಕೆಲವರನ್ನುವರು. ಹಾಗಲ್ಲವು ನಕ್ಷತ್ರೇಷ್ಟಿ ಮುಂತಾದ ಶ್ರೌತ ಕರ್ಮಗಳಲ್ಲಿ ಶ್ರುತ್ಯುಕ್ತವೂ, ಋತು ಶಾಂತಿ ಮುಂತಾದ ಸ್ಮಾರ್ತ ಕರ್ಮಗಳಲ್ಲಿ ಸ್ಮೃತ್ಯುಕ್ತವೂ ಗ್ರಾಹ್ಯವೆಂದು ನಕ್ಷತ್ರದೇವತಾ ನಿರ್ಣಯವಾಗಿರುತ್ತದೆ, ಹುಬ್ಬೆಯು ಉಗ್ರ ನಕ್ಷತ್ರ ಇದರಲ್ಲಿ ಹೋದ ವಡಿವೇ ಸಿಕ್ಕೋದಿಲ್ಲ. ಜ್ವರ ಬಂದರೆ ೧ ತಿಂಗಳು ಕ್ರೂರ, ಭಗದೇವತೆಗೆ ಶಾಂತಿ ಮಾಡಿದರೆ ಆರೋಗ್ಯವಾಗುತ್ತೆ, ಮೈನೆರದರೆ ಗಂಡನಿಗೆ ಕ್ರೂರ, ಮಕ್ಕಳಾಗೋದಿಲ್ಲ, ೬ ತಿಂಗಳು ಬಿಟ್ಟಾಗಲೀ ೧೬ ದಿನದೊಳಗೇ ಆಗ ಬೇಕಾದರೇ ಶಾಂತಿ ಮಾಡಿ ಆಗಲೀ ಗರ್ಭಾಧಾನ ಮಾಡಿದರೆ ದೋಷವಿಲ್ಲ, ಈ ನಕ್ಷತ್ರದಲ್ಲಿ ಕ್ಷೌರ, ಪ್ರಯಾಣ, ಮುಂಜಿ, ಮದುವೆ ಮುಂತಾದ ಶುಭಕರ್ಮಗಳು ಕೂಡದು, ಕಪಟ ಮೋಸ, ಸುಳ್ಳು, ವಿರೋಧ, ಅಗಿಯುವಿಕೆ, ಮುರಿಯುವಿಕೆ, ಶೀಳುವಿಕೆ, ಹಡೆಯುವಿಕೆ, ಸುಡುವಿಕೆ, ಜೂಜು, ಮಾಟ, ಕಳವು, ನಿಧಿನಿಕ್ಷೇಪ ಪಿಶಾಚಕೃತ್ಯ ಇಂಥಾದ್ದಕ್ಕೆ ಬಲಕರವು. ಇದರಲ್ಲಿ ಹುಟ್ಟಿದವರಿಗೆ ಕಲಿಸುಖ ವೃದ್ಧಿಯುಂಟು. ೬ ಗಂಡಕಾಲಗಳು ಕಳೆದರೆ ೮೯ ವರುಷ ಆಯುಷ್ಯವು. ಇಂತು ಹುಬ್ಬೆ ವಿಚಾರ ಸಮಾಪ್ತ. ... *

---

—*(ಉತ್ತರಫಲ್ಗುನೀ ನಕ್ಷತ್ರಕ್ಕೆ ೧೨.)*—

ಶ್ಲೋ॥ ವಾಪೀಕೂಪ ತಟಾಕದೀರ್ಘಿಕಪುರಪ್ರಾಸಾದ ದೇವಾರ್ಚನಂ। ಶಯ್ಯಾರತ್ನ ವಿಭೂಷಣಾದಿರಚನಂ ಸಿಹ್ಮಾಸನಾದ್ಯಾಸನಂ। ಸ್ಥಾನೋದ್ವರ್ತನಮಂಗಳಂಪರಿಣಯಂನೀರಾಜನಾರಾಧನಂ। ಕೃಷ್ಯಾರಂಭಪುರಪ್ರವೇಶನಖಿಲಂಸ್ಯಾದರ್ಯಮರ್ಕ್ಷೇಶುಭಂ॥ ಟೀ—ಟೊ—ಪಾ—ಪಿ— ಉತ್ತರ ದ್ವಿತಾರಾ ರಕ್ತವರ್ಣಃ ಪರ್ಯಂಕಾಕಾರಃ— ಸ್ತ್ರೀಲಿಂಗಂ। ಊರ್ಧ್ವಮುಖೀ—ಮನುಷ್ಯಗಣಃ— ಯೋನಿಗೌಃ। ಕ್ಷತ್ರಿಯಜಾತಿಃ। ತ್ರಿಪಾತ್। ಅಂಧಕ ಲೋ

ಚನಂ। ಸ್ಥಿರಂ—ಅಂತಃ—ಅದ್ಯಕಲ್ಪತಾ—ಸ್ಥಾನಂಶೂನ್ಯಂ—ಬದರೀವೃಕ್ಷಃ—ಪಕ್ಷೀಗೃಧ್ರಃ। ಛಕಾರಾಕ್ಷರಂ।ಬೃಹಸ್ಪತಿಜಾತಿಃ। ಅಷ್ಟಾದಶಘಟಿಕಾನಂತರಂ ವಿಷನಾಡ್ಯಶ್ಚತಸ್ರಃ। ಯಾತ್ರಾವರ್ಜ್ಯ। ಆದೌಸಪ್ತಘಟಿಕಾನಂತರಂ ಮಾಷಾಶನಂಭೋಜ್ಯಂ। ದಕ್ಷಿಣಪಶ್ಚಿಮ ಪ್ರಯಾಣೇಶುಭದಂ। ಜ್ವರೇಸಪ್ತದಿನಾನಿಪೀಡಾ-ತಚ್ಛಾಂತಿಃ— ಪದ್ಮವರ್ಣಂದ್ವಿಭುಜಂ— ಪದ್ಮಕರಂ— ಅರ್ಯಮಣಂ ದೇವತಾಂ ಪ್ರೌತೇ ತುಭಗದೇವತಾಂ ಆವಾಹಯೇತ್ ಮಂತ್ರಃ । ಅರ್ಯಮಣಂ—ಸ್ಮರೇತ್ । ಇತಿ ಮಂತ್ರೇಣ ಷೋಡಶೋಪಚಾರೈಸ್ಸಂಪೂಜ್ಯ—ಪದ್ಮವರ್ಣ ವಸ್ತ್ರಂ— ಕುಂಕುಮಗಂಧಃ— ನೀಲೋತ್ಪಲಪುಷ್ಪ — ಗುಗ್ಗುಲಧೂಪಂ— ರಕ್ತೋದನನೈವೇದ್ಯಂ— ಪ್ರಿಯಂಗುಸಹಿತಸಾಜ್ಯೇನ ಗಾಯತ್ರ್ಯಷ್ಟೋತ್ತರ ಶತಂಹುತ್ವಾ— ಗಂಧಮಾಲ್ಯೈಘೃತೋದನಬಲಿಂಹರೇತ್—ಸಪ್ತಾಹಾತ್ಸುಖೀಭವತಿ—ಯೋಗಾ। ಆದಿವಾರೆ ಸಾಮಾನ್ಯಯೋಗಃ। ಸೋಮೆಂಡಗ್ಧಯೋಗಃ—ಕುಜೆಸಿದ್ಧಯೋಗಃ—ಬುಧೆಯಮಕಂಟಕಯೋಗಃ--ಗುರೌಉಗ್ರಯೋಗಃ— ಶುಕ್ರೆಶುಭಯೋಗಃ—ಶನೌವಿಷಯೋಗಃ—ಚತುರ್ಥ್ಯಾಂಜ್ವಾಲಾಮುಖಿಯೋಗಃ—ಭದ್ರಾಯಾಂ ನಿರ್ಜೀವಯೋಗಃ—ರೇವತ್ಯಾಕ್ರೂರಗ್ರಹಸ್ಥಿತೇ ಮಹಾಶೂಲ ಯೋಗಃ—ಮಾರ್ಗಶೀರ್ಷ ಮಾಸೆಶೂನ್ಯಂ—ಅಸ್ಮಿನ್ನುತ್ಪಾತ ದರ್ಶನೆ— ವಾತಪೈತ್ಯ ಕ್ಷುದ್ಭಯಂ — ಇಂದ್ರಚಾಪಪರಿವೇಷದರ್ಶನೆ ವೃಷ್ಟಿಃ। ಸಂಕ್ರಮೇಮಧ್ಯಾರ್ಘಃ — ಪ್ರಥಮ ರಜಸ್ವಲಾಕನ್ಯಾಸುಪುತ್ರವತೀಭವತಿ । ಋತು— ಪುಂಸವನ—ಸೀಮಂತ—ನಾಮಕರಣ—ಅನ್ನಪ್ರಾಶನೆ— ಚೌಲ—ಉಪನಯನ—ಸಮಾವರ್ತನ-ವಿವಾಹ ನವವಸ್ತ್ರಾಭರಣ—ಭೂಷಣ—ಪಟ್ಟಾಭಿಷೇಕ—ಸಿಹ್ಮಾಸನಾಂದೋಳಿಕಾರೋಹಣ- ಪುರಪ್ರವೇಶ—ದೇವತಾಸ್ಥಾಪನ-ಶಂಕುಸ್ಥಾಪನ—ಗ್ರಾಮಪ್ರವೇಶ—ಕೃಷಿ— ಬೀಜಾವಾಪನ—ವನಾದಿ ಸ್ಥಿರಕಾರ್ಯೇಷುಪ್ರಶಸ್ತಾ। ಅಸ್ಮಿನ್ನಕ್ಷತ್ರೆ ಜಾತಸ್ಯಗುಣಾಃ— ಪ್ರಥಮಪಾದೇಪಿತೃಗಂಡಃ — ದ್ವಿತೀಯಮಾಸ ಪರ್ಯಂತಂ ಪುತ್ರಾವಲೋಕನಂವರ್ಜ್ಯಂ — ಅತಊರ್ಧ್ವಂಶಾಂತಿಂಕುರ್ಯಾತ್—ಕಾರ್ಯಶೀಲಃ ಅಭಿಮಾನೀ—ಮಂತ್ರಜ್ಞಃ— ಸುಭಗಃ—ಕುಲಶ್ರೇಷ್ಟಃ—ಸ್ತ್ರೀವಶ್ಯಃ—ರೋಗಿ—ಉಷ್ಣದೇಹಿ— ವಿನಯಪ್ರಿಯಃ—ಅಲ್ಪಸೌಖ್ಯವಾನ್—ಪಂಡಿತಾಂಶಃ— ಶರೀರೆಮತ್ಸ್ಯಾಂಕಿತಃ— ಪ್ರಥಮಪಾದಸ್ಯ ಗುರುಃ—ಬಲಾಂಶಃ—ವಧೂಪ್ರಿಯಃ— ಸದಾಶೂರಃ—ದೇಹರೋಗಿ—ದಾನಗುಣಃ—। ದ್ವಿತೀಯಪಾದಸ್ಯಶನಿಃ। ಪಾಪಾಂಶಃ—ದರಿದ್ರಃ—ಚಪಲಃ- ಕೃಪಾ

ಹೀನಃ- ತೃತೀಯಪಾದಸ್ಯ ಮಂದಃ- ಉಗ್ರಾಂಶಃ - ಡಾಂಭಿಕಃ- ಗರ್ವೀ- ಕ್ಷಿಪ್ರ ಕೋಪಃ-ವ್ಯಸನೀ- ಅಪಕಾರೀ-ಮತ್ಸರಃ. ಚತುರ್ಥ ಪಾದಸ್ಯ ಗುರುಃ. ಉತ್ಕೃಷ್ಟಾಂಶಃ- ಪರಿಹಾಸಕಃ - ಆಚಾರವಾನ್ - ಪರಾಪೇಕ್ಷಃ - ಅಸ್ಮಿನ್ ಜಾತಸ್ಯ ರವಿಮಹಾದಶಾಷಡ್ವರ್ಷಾಣಿ- ಅಂತರ್ದಶಾ- ತ್ರಿಮಾಸಾಃ- ಅಷ್ಟಾದಶದಿನಾನಿ- ಸಪ್ತದಿನಾನಿಗಂಡಃ - ತ್ರಿಮಾಸೇ - ದಶಮಾಸೇವಾ ಜ್ವರಭಯಂ-ಪಂಚಮವರ್ಷೇ ಶ್ವಾಸಕಾಲಃ- ವಿಂಶತಿವರ್ಷೇ ಜ್ವರಾಗ್ನಿಭಯಂ-ಚತುಷ್ಪಾದ್ಭಯಂ - ತ್ರಿಂಶಚ್ಚತ್ವಾರಿಂಶದ್ವರ್ಷೇವಾ ಜಲರಜ್ಜುಭಯಂ - ಷಷ್ಟಿವರ್ಷೇ ಸಪ್ತತಿವರ್ಷೇವಾ ಅಪಮೃತ್ಯುಃ-ಅಥವಾ ವ್ಯಾಘ್ರಭಯಂ- ಅಶೀತಿವರ್ಷೇ ಕಂಟಕಭಯಂ ತತ್ಪರಿಹಾರೇಸತಿ ಚತುರಶೀತಿ ವರ್ಷಾಣಿ ಪರಮಾಯುಃ ॥ ಇತ್ಯುತ್ತರಾ ನಕ್ಷತ್ರ ವಿಚಾರಃ । ... ... *

ತಾತ್ಪರ್ಯ। ಉತ್ತರ ಫಲ್ಗುನೀ ನಕ್ಷತ್ರದಲ್ಲಿ ಹೋದವಡವೇ ೩ ದಿನಕ್ಕೆ ಶೀಘ್ರವಾಗಿ ಸಿಕ್ಕೀತು. ಇದರ ಕೆಲಸಗಳು ಸ್ಥಿರಕಾರ್ಯಗಳಾಗಿರುವವು. ಕ್ಷೌರ, ಪ್ರಯಾಣ, ಅಭ್ಯಂಜನ, ಹೊಸ, ಅಲಂಕಾರ, ಹೊಸಮನೆ, ರಾಜದರ್ಶನ, ನೂತನ ಕಾರ್ಯಾರಂಭ, ಮುಂಜಿ, ಮದುವೆ, ಶೋಭನ, ಸೀಮಂತ, ಚೌಲ, ಅನ್ನಪ್ರಾಶನ, ಹಲಕ್ರಿಯೆ, ಕಬ್ಬಿನಗಾಣ , ಆಲೇಮನೆ, ಬೀಜಬಿತ್ತುವಿಕೆ, ವಾಹನ, ಸಿಹ್ಮಾಸನವನ್ನು ಏರುವಿಕೆ, ಶಂಕುಸ್ಥಾಪನ, ವಾಸ್ತು, ಶಿಲ್ಪ, ಇತ್ಯಾದಿ ಶುಭಕಾರ್ಯಗಳಾಗಬಹುದು. ಜ್ವರ ಬಂದರೆ ೭ ದಿನ ಕ್ರೂರ, ಅರ್ಯಮದೇವತೆಗೆ ಶಾಂತಿ ಮಾಡಿದರೆ ಆರೋಗ್ಯ, ಇದರಲ್ಲಿ ಹುಟ್ಟಿದರೆ ಪ್ರಬಲಿಸುತ್ತಾನೆ. ೧ ನೇ ಪಾದದಲ್ಲಿ ಹುಟ್ಟಿದ ಮೊಗುವಿಗೆ ೧ ತಿಂಗಳು ತಂದೆಗೆ ಕ್ರೂರ. ಆ ಮೇಲೆ ಶಾಂತಿ ಮಾಡಿದರೆ ದೋಷವಿಲ್ಲ. ಮೈ ನೆರದವಳು ಸೌಮಂಗಲ್ಯ ಸೌಭಾಗ್ಯ ಪುತ್ರವತಿಯಾಗಿ ಬಾಳುವಳು, ೮ ಗಂಡಗಳು ಕಳೆದುಳಿದರೆ ೮೪ ವರುಷಗಳು ಆಯುಷ್ಯ. ಇತ್ಯುತ್ತರ ಫಲ್ಗುನೀ ವಿಚಾರ. ... *

## ಹಸ್ತನಕ್ಷತ್ರಕ್ಕೆ ೧೩.

ಶ್ಲೋ। ಪಾಣಿಗ್ರಹಾದ್ಯಖಿಲಮಂಗಳ ಕರ್ಮಯಾತ್ರಾ ರಾಜ್ಯಾಭಿಷೇಕ ಗೃಹಹರ್ಮ್ಯಸುರಪ್ರತಿಷ್ಠಾಃ । ಚಿತ್ರಾದಿವಸ್ತ್ರವರಭೂಷಣ ವಾಹನಾನಿ ದಿವ್ಯಾಗಮಾದ್ಯಖಿಲಕರ್ಮಕರೇನಿದಧ್ಯಾತ್। ಪೂ—ಷ--ಣ--ಥ ಹಸ್ತ । ಪಂಚತಾರಾ। ಶ್ವೇತವರ್ಣಃ- ಹಸ್ತಾಕೃತಿಃ- ತಿರ್ಯಙ್ಮುಖಾ- ರವಿರ್ದೇವತಾ ವೈಶ್ಯ

ಜಾತಿಃ— ಪುರುಷಃ ದೇವಗಣಃ—ಮಂದಲೋಚನಾ—ಯೋನಿರ್ಮಹಿಷಃ। ಅಂತಸ್ಸುಮತಾರಾಕ್ಷಿಪ್ರಂ। ಸ್ಥಾನಂಪಟ್ಟಣಂ—ಪ್ಲಕ್ಷವೃಕ್ಷಃ—ಪಕ್ಷೀಶುಕಃ—ಟಕಾರಸ್ವರಃ। ಅಸ್ಮಿನ್ನಕುಲಸಹದೇವೌಜಾತೌ— ಏಕವಿಂಶತಿಘಟಿಕಾನಂತರಂವಿಷನಾಡ್ಯಶ್ಚತಸ್ರಃ—ಯಾತ್ರಾಯಾತಂಡುಲಪಿಷ್ಟಭಕ್ಷಣಂ ಸರ್ವದಿಕ್ಷು ಪ್ರಯಾಣೆ ಶುಭದಂ—ಜ್ವರೆಸಪ್ತದಿನಾನ್ಯರಿಷ್ಟಾನಿ। ತಚ್ಛಾಂತಿಃ— ಪದ್ಮವರ್ಣಂ— ದ್ವಿಭುಜಂ—ಪದ್ಮಕರಂ— ಸಪ್ತಾಶ್ವರಥವಾಹನಂ— ಸವಿತಾರಂದೇವಂತತ್ಪ್ರತಿಮಾಯಾಮಾವಾಹಯೆತ್—ರಕ್ತವಸ್ತ್ರಂ—ರಕ್ತಚಂದನಂ—ರಕ್ತಕರವೀರಪುಷ್ಪಂ ದಶಾಂಗಧೂಪಃ— ಘೃತಾಪೂಪಪರಮಾನ್ನನೈವೇದ್ಯಂ। ಉದುತ್ಯಂ— ಸೂರ್ಯಂ। ಇತಿಮಂತ್ರೇಣಷೋಡಶೋಪಚಾರೈಃ ಸಂಪೂಜ್ಯಅರ್ಕಸಮಿಧಾಜ್ಯೈನ ಗಾಯತ್ರ್ಯಾಅಷ್ಟೋತ್ತರಶತಂಹುತ್ವಾ - ಗಂಧಮಾಲ್ಯೈರ್ಮಾಷಾನ್ನಬಲಿಂಹರೇತ್। ದಕ್ಷಿಣದಿಶಂಪ್ರಾಚೀಂವಾ। ಸಪ್ತಾಹಾತ್ಸುಖೀಭವತಿ। ಯೋಗಾಃ। ಆದಿವಾರೆಅಮೃತಸಿದ್ಧಯೋಗಃ— ಪಂಚಮ್ಯಾಂವಿಷಯೋಗಃ— ಸೋಮೇಸಿದ್ಧಯೋಗಃ—ಕುಜೆವರಯೋಗಃ—ಬುಧೆಯಮಕಂಟಕಯೋಗಃ— ಗುರೌಕಲಹಯೋಗಃ—ಶನೌನಾಶಯೋಗಃ- ಆದ್ಯಪಾದೆದಿನಮೃತ್ಯುಃ। ಪೂರ್ಣಾಯಾಂ ನಿರ್ಜೀವಯೋಗಃ । ಉತ್ತರಾಭಾದ್ರಾನಕ್ಷತ್ರೆಕ್ರೂರಗ್ರಹಸ್ಥಿತೆ ಮಹಾಶೂಲಯೋಗಃ।ಪುಷ್ಯಮಾಸೆಶೂನ್ಯಂ।ಅಸ್ಮಿನ್ನುತ್ಪಾತದರ್ಶನೆ। ಕ್ಷುಧಾದಿಭಯಂ ಭವತಿ। ಸಂಕ್ರಮೆಮಧ್ಯಾರ್ಘಃ। ಪ್ರಥಮರಜಸ್ವಲಾಕನ್ಯಾಸುಪುತ್ರಧನಭೋಗವತೀಭವತಿ। ಋತುಪುಂಸವನ ಸೀಮಂತನಾಮಕರಣಾನ್ನ ಪ್ರಾಶನ ಚೌಲೋಪನಯನಕರ್ಣವೇಧ ಅಕ್ಷರಗ್ರಹಣ ವೇದಶಾಸ್ತ್ರಾಭ್ಯಾಸ ಸಮಾವರ್ತನ ವಿವಾಹಕ್ಷೌರಾಭ್ಯಂಜನ ವಸ್ತ್ರಾಭರಣಭೂಷಣ ಶಾಂತಿ ಪೌಷ್ಟಿಕ ಮಹೋತ್ಸವ ಆಂಧೋಲಿಕಾರಥಾಶ್ವಾರೋಹಣ ಪಶುಕ್ರಯವಿಕ್ರಯಕೃಷಿ ಬೀಜಾವಾಪ ಧನಧಾನ್ಯಸಂಗ್ರಹ ನವರತ್ನಪರಿಗ್ರಹ ಮಂತ್ರಶಾಸ್ತ್ರಾಭ್ಯಾಸ ಯಾತ್ರಾಭೈಷಜ್ಯಾದ್ಯಿಶುಭಕಾರ್ಯೇಷುಪ್ರಶಸ್ತಃ। ಅಸ್ಮಿನ್ನಕ್ಷತ್ರೆಜಾತಸ್ಯಗುಣಾಃ। ಪ್ರಶಾಂತಃ। ಪ್ರಾಗಲ್ಭ್ಯವಾನ್! ರಕ್ಷಕಾಬಪವಃ। ಮೃದಂಗಾದಿಭಿಃ ಪರಿಜನಾನಂದಕರಃ।ರಾಜಪೂಜ್ಯಃ। ಪರಕಾರ್ಯರತಃ। ಗುರುಪೂಜಾಕ್ರಮಃ। ಶತ್ರುಘ್ನಃ। ಕೀರ್ತಿಮಾನ್। ಶರೀರೇಮತ್ಸ್ಯಾಂಕಿತಃ। ಪ್ರಥಮಪಾದಸ್ಯಕುಜಃ। ತಸ್ಕರಾಂಶಃ। ಕ್ಷಿಪ್ರಕಾರ್ಯಃ।ಬಲವಾನ್। ನಿರ್ಧನಃ। ದ್ವಿತೀಯಪಾದಸ್ಯಶುಕ್ರಃ। ಭೋಕ್ತ್ರಂಶಃ। ಚಾರ. ಶರೀರಃ ಮಂದಬುದ್ಧಿಃ। ಶತ್ರುಹೀನಃ। ತೃತೀಯಪಾದಸ್ಯಬುಧಃ। ಪಂಡಿತಾಂಶಃ। ಕ್ರಯವಿ

ಕ್ರಯನಿಪುಣಃ ಕಾಮುಕಃ। ದುರ್ಮನಾಃ। ಚತುರ್ಥಪಾದಸ್ಯಚಂದ್ರಃ। ಧನಾಂಶಃ ರಾಜಕಾರ್ಯರತಃ। ಸನ್ಮಾನೀ। ಕಿಂಚಿತ್ಕೋಪವಾನ್। ಅಸ್ಮಿನ್ಜಾತಸ್ಯಚಂದ್ರಮಹಾದಶಾದಶವರ್ಷಾಣಿ। ಅಂತರ್ದಶಾದಶಮಾಸಾಃ। ಪ್ರಥಮವರ್ಷೇಗಂಡಃ ಷಡ್ವರ್ಷೇಸಪ್ತವರ್ಷೇವಾಅಪಮೃತ್ಯುಃ।ದಶವರ್ಷೇದ್ವಾದಶವರ್ಷೇವಾ ಜ್ವರಭಯಂ ದ್ವಾವಿಂಶದ್ವರ್ಷೇವಿತ್ತಭಯಂ। ತ್ರಿಂಶದ್ವರ್ಷೇನೃಪಭಯಂ। ಚತುಶ್ಚತ್ವಾರಿಂಶದ್ವರ್ಷೇಮಂತ್ರಿಜನಸುಹೃದ್ಭಯಂ। ಅಥವಾ ದುರುಪದ್ರವಭಯಂ। ಚಿತ್ತವೈಕಲ್ಯಂ। ಅಷ್ಟಚತ್ವಾರಿಂಶದ್ವರ್ಷೇರಾಜಪೂಜ್ಯತಾ। ದ್ರವ್ಯಲಾಭಃ। ಷಷ್ಟಿವರ್ಷೇ ಅಪಮೃತ್ಯುಃ। ಸಪ್ತತಿವರ್ಷೇಮಹಾಕಂಟಕಭಯಂ। ತತ್ಪರಿಹಾರೇಸತಿ ಅಷ್ಟಾಶೀತಿವರ್ಷಾಣಿಪರಮಾಯುಃ। ಇತಿ ಹಸ್ತನಕ್ಷತ್ರವಿಚಾರಃ। ೧೩। *

ತಾತ್ಪರ್ಯವು। ಹಸ್ತನಕ್ಷತ್ರಕ್ಕೆಸೂರ್ಯನು ದೇವತೆ, ಇದರಲ್ಲಿ ರೋಗತಗಲಿದರೆ ಬ್ಯಾಗ ವಾಸಿಆಗುತ್ತೆ. ಚಿಕಿತ್ಸಗೆ ಬಹಳ ವಳ್ಳೇದು, ಮಂತ್ರ ಜಪ ಸಿದ್ಧಿಸುತ್ತೆ, ಶೀಘ್ರಕರ್ಮ, ಶುಭಕಾರ್ಯಗಳಿಗೆಲ್ಲಕ್ಕೂ ವಳ್ಳೇದು, ಅಕ್ಷರಾಭ್ಯಾಸಕ್ಕೆ ಜ್ಞಾನವೃದ್ಧಿಕರ, ಸಪ್ತಮಿೂ ಆದಿತ್ಯವಾರ ಹಸ್ತನಕ್ಷತ್ರ ಕೂಡಿದಾಗ ಸರ್ವಕಾರ್ಯಸಿದ್ಧಿ. ಇದರಲ್ಲಿ ಹುಟ್ಟಿದರೂ ಮೈನೆರದರೂ ವಳ್ಳೇದು. ೫ ಗಂಡಗಳು ಕಳದುಳದರೆ ೮೮ ವರುಷ ಆಯುಷ್ಯ, ಇತಿ ಹಸ್ತವಿಚಾರವು. *

---

## ಚಿತ್ತ ನಕ್ಷತ್ರಕ್ಕೆ ೧೪.

ಶ್ಲೋ। ಚಿತ್ರಾಂಬರಾಭರಣಭೂಷಣಚಿತ್ರಕರ್ಮ। ಚೂಡಾವಿಧಿಶ್ರವಣವೇದನಚೌಲಮೌಂಜೀ। ಸಂಗೀತನೃತ್ತವಿವಿಧಾಧ್ಯಯನಾಗಮಾಂಶ್ಚ। ಶಿಲ್ಪಂಚವಾಸ್ತುಮಪಿಚಿತ್ರಭಯೋಗ್ಯಮಾಹುಃ। ಪೇ— ಪೋ— ರಾ— ರಿ—ಚಿತ್ತೆ—ಮೌಕ್ತಿಕಾಕೃತಿರೇಕತಾರಕಾ—ಶ್ವೇತವರ್ಣಃ—ಸ್ತ್ರೀಲಿಂಗಂ—ತ್ವಷ್ಟಾದೇವತಾ-ಮಧ್ಯಲೋಚನಂ— ತಿರ್ಯಙ್ಮುಖಃ—ವ್ಯಾಘ್ರಯೋನಿಃ। ರಾಕ್ಷಸಗಣಃ—ಮೃದುಶೀಲಂ। ಬಾಹ್ಯಸ್ಥಿತಃ—ಶೂನ್ಯಸ್ಥಾನಂ- ವಾಯುಮಂಡಲಂ—ಬಿಲ್ವವೃಕ್ಷಃ-ಶ್ವೇತಗೃಧ್ರಪಕ್ಷೀ— ಅಕಾರಸ್ವರಃ—ವಿಂಶತಿಘಟಿಕಾನಂತರಂ ವಿಷನಾಡ್ಯಶ್ಚತಸ್ರಃ- ಯಾತ್ರಾವರ್ಜಿತಾ—ಆದಿಭಾಗೇಘಟಿಕಾಚತುಷ್ಟಯಂ ತ್ಯಕ್ತ್ವಾಚಿತಾನ್ನಂಭುಕ್ತ್ವಾಪ್ರತೀಚೀಮವಾಚೀಂವಾಗಚ್ಛೇತ್ ಶುಭದಂಭವತಿ— ಜ್ವರಸಂಭವೆ ಏಕಾದಶದಿನಾನಿಷ್ಟಂ— ಪ್ರಬಲರೋಗೇ ಏಕಾದಶಮಾಸಾಬ್ದ ಪರ್ಯಂತಂವಾ।

ತಚ್ಛಾಂತಿಸ್ತು— ಚಿತ್ರವರ್ಣಂ । ಚತುರ್ಭುಜಂ । ಅಕ್ಷಸೂತ್ರಕಮಂಡಲುಪ
ದ್ಮಾಭಯಕರಂ । ಕಮಲಾಸನಸ್ಥಂ । ತ್ವಷ್ಟಾರಂದೇವತಾಂತತ್ಪ್ರತಿಮಾಯಾ
ಮಾವಾಹಯೇತ್ । ಚಿತ್ರವಸ್ತ್ರಂ । ಕುಂಕುಮಗಂಧಂ। ಸರ್ಜರಸಧೂಪಂ ।
ಮೋದಕಾಪೂಪನೈವೇದ್ಯಂ । ಚಿತ್ರಪುಷ್ಪಂಚಸಮರ್ಪ್ಯ । ಚಿತ್ರಂದೇವಾನಾ
ಮುದಗಾತ್— ತಸ್ಥುಷಶ್ಚ । ಇಂತಿಮಂತ್ರೇಣಷೋಡಶೋಪಚಾರೈಃ ಸಂಪೂ
ಜ್ಯ। ಬಿಲ್ವಸಮಿದ್ಭಿಃ ಚಿತ್ರಾನ್ನೇನಚರುಣಾ।ಆಜ್ಯೇನಹವಿಷಾ।ಗಾಯತ್ರ್ಯಾಮಂ
ತ್ರೇಣಅಷ್ಟೋತ್ತರಶತಾಹುತೀರ್ಹುತ್ವಾ। ಗಂಧಮಾಲ್ಯೈಃದಕ್ಷಿಣಾಯಾಂಪ್ರ
ತೀಚ್ಯಾಂವಾ । ಚಿತ್ರಾನ್ನಬಲಿಂಹರೇತ್ ಏಕಾದಶಾಹಾತ್ಸುಖೀಭವತಿ । ತಿಥಿ
ವಾರನಕ್ಷತ್ರಯೋಗಾಸ್ತು। ಆದಿತ್ಯವಾರೆ ನಂದಾಯಾಂ ವರಯೋಗಃ।ಸೋ
ಮದ್ವಿತೀಯಾಯಾಂವಿಷಯೋಗಃ । ಭೌಮೇನಾಶಯೋಗಃ । ಬುಧೇಯಮ
ಕಂಟಕಯೋಗ, । ಗುರೌಮೃತ್ಯುಯೋಗಃ । ಶನೌರಿಕ್ತಾಯಾಂ ನಿರ್ಜೀವ
ಯೋಗಃ । ಪೂರ್ವಾಭಾದ್ರಾನಕ್ಷತ್ರೇಕ್ರೂರಗ್ರಹಸಂಚಾರಕಾಲೆ ಮಹಾಶೂ
ಲಯೋಗಃ। ಯೋಗನಾಮಾನುರೂಪಂಫಲಂಭವತಿ। ಪರಿವೇಷೇಂದ್ರಚಾಪ
ದರ್ಶನೆವೃಷ್ಟಿಃ। ಉತ್ಪಾತದರ್ಶನೆಧಾನ್ಯಕ್ಷೀರಸಮೃದ್ಧಿಃ । ಸಂಕ್ರಮೆಅತ್ಯರ್ಘಃ।
ಪ್ರಥಮರಜಸ್ವಲಾಸೌಮಂಗಲ್ಯಸೌಭಾಗ್ಯ ಸುಪುತ್ರವತೀಭವತಿ । ಸ್ತ್ರೀಸಂ
ಭೋಗನಾಮಕರಣಾನ್ನಪ್ರಾಶನಕರ್ಣವೇಧ ವಿದ್ಯಾಕ್ಷರಗ್ರಹಣ ಚೌಲೋಪನ
ಯನ ವೇದಶಾಸ್ತ್ರಾಭ್ಯಾಸ ಕ್ಷೌರಾಭ್ಯಂಜನ ನವವಸ್ತ್ರಾಭರಣ ಧಾರಣ ಗ
ಜಾಶ್ವ ರಥಾದ್ಯಾರೋಹಣ ನೃತ್ತಗೀತವಾದ್ಯಾಭ್ಯಾಸ ಚಿತ್ರಲೇಖನಮಲ್ಲಕ್ರೀ
ಡಾಂಜನ ವೀಕ್ಷಣ ದೇವತಾದರ್ಶನ ಪ್ರಭುದರ್ಶನ ಪಟ್ಟಾಭಿಷೇಕ ಭೈಷಜ್ಯಾ
ದಿಶುಭಕಾರ್ಯಾಣಿಪ್ರಶಸ್ತಾನಿ। ಚಿತ್ತನಕ್ಷತ್ರಜಾತಕಃ ಭೋಗಭಾಗ್ಯವಾನ್ ।
ಕಾಮೀ। ಸ್ತ್ರೀಲೋಲಃ। ವಿದ್ಯಾವಿಶಾರದಃ। ಪ್ರಥಮಪಾದಸ್ಯರವಿಃ। ರಾಜಾಂ
ಶಃ। ಉಗ್ರಸ್ವಭಾವಃ। ರೂಪವಾನ್ । ಪರಿಹಾಸಕಃ।ಚಪಲಃ । ರಾಜಮಾನ್ಯಃ
ಧಾರ್ಮಿಕಃ । ಪುತ್ರವಾನ್। ದ್ವಿತೀಯಪಾದಸ್ಯ. ಬುಧಃ। ಪಂಡಾಂಶಃ । ಬುದ್ಧಿ
ಮಾನ್। ತಪಸ್ವೀ। ಮಧುರಭಾಷೀ। ವನಿತಾಪ್ರಿಯಃ। ಲುಬ್ಧಃ । ತೃತೀಯಪಾ
ದಸ್ಯ। ಶುಕ್ರಃ। ವಿಜಯಾಂಶಃ। ನಿರ್ಭಯಃ। ಯಶಸ್ವೀ। ಪರಾಕ್ರಮಸಂಪನ್ನಃ
ಸ್ಥಿರಚಿತ್ತಃ। ಚತುರ್ಥಪಾದಸ್ಯ। ಕುಜಃ । ದರಿದ್ರಾಂಶಃ । ಪರಾಕ್ರಮಶೀಲಃ ।
ಕ್ಲೇಶವಾನ್ । ಫಲಕಾಲಪರಿತ್ಯಾಗೀ। ದುರ್ಮಾರ್ಗಚಾರೀ। ಸಾಹಸೀಚ । ಪ್ರ
ಥಮದ್ವಿತೀಯಪಾದಸಂಧೌಪುತ್ರಜನನೇಸತಿಪಿತೃಗಂಡಃ । ಷಣ್ಮಾಸಪರ್ಯಂತಂ

ಪುತ್ರಮುಖಾವಲೋಕನಂನಕುರ್ಯಾತ್ । ತತಃಪರಂಶಾಂತಿಂಕೃತ್ವಾಪುತ್ರಂಪಶ್ಯೇತ್। ಆದೌಅಂಗಾರಕಮಹಾದಶಾಸಪ್ತವತ್ಸರಾಃ । ಅಂತರ್ದಶಾಚತ್ವಾರೋಮಾಸಾಃ। ಸಪ್ತವಿಂಶತಿದಿನಾನಿಚ । ಪ್ರಥಮಾಬ್ದೇಶಿಶುರೋಗಃ । ಪಂಚಮಾಬ್ದೇಅಶ್ವಗಂಡಃ। ಅಷ್ಟಮಾಬ್ದೇಪಶುಗಂಡಃ। ದಶಮೇವಾಹನಗಂಡಃ । ಏಕವಿಂಶತಿವತ್ಸರೇಶಸ್ತ್ರಭಯಂ। ಪಂಚವಿಂಶತಿವತ್ಸರೇಕಂಟಕಪ್ರಾಪ್ತಿಃ। ಪಂಚಾಶದ್ವತ್ಸರೆ ಅಪಮೃತ್ಯುಃ। ಷಷ್ಟಿವತ್ಸರೇಬಂಧನಭಯಂ। ಚತುರಶೀತಿವತ್ಸರಾಃ ಪರಮಾಯುಃ। ಇತಿ ಚಿತ್ತನಕ್ಷತ್ರವಿಚಾರಃ। ೧೪। ... *

ತಾತ್ಪರ್ಯ॥ ಮುತ್ತಿನ ಹಾಗಿರುವ ೧ ಚುಕ್ಕೆ ಚಿತ್ತನಕ್ಷತ್ರವು, ಪ್ರಯಾಣಕೂಡದು, ಜ್ವರಬಂದರೆ ೧೫ ದಿನಕಾರಿ, ತ್ವಷ್ಟೃದೇವತೆಗೆಶಾಂತಿ ಮಾಡಿದರೆ ಆರೋಗ್ಯವಹುದು,ಇದರಲ್ಲಿ ಆಕಾಶ ಬಿಲ್ಲು ಮಾಡಿದರೆಮಳೆ ಬರುತ್ತೆ,ಸ್ತ್ರೀನೆರದರೆ ಮಕ್ಕಳನ್ನು ಹೆರುವಳು, ಮದುವೆಕೂಡದು, ಮಿಕ್ಕಾದ ಶುಭಕರ್ಮಗಳೆಲ್ಲವೂ ಆಗಬಹುದು, ಚಿತ್ರಬರಿಯುವಿಕೆ, ಕತ್ತುವಿಕೆ, ಕೈಗೆಲಸಗಳು, ಮುದ್ರೆಹೊಡಿಯುವದು, ವಿದ್ಯೆಗಳನ್ನು ಕಲಿಯುವದು, ವಿದ್ಯೆಕಲಿಸುವದು, ಶಿಕ್ಷಿಸುವದು,ಮದ್ದುಮಾಡುವದು, ಮದ್ದು ಕೊಡಿಯುವದು,ಶೃಂಗಾರ ಇವುಗಳಿಗೆ ಒಳ್ಳೇದು, ಇದರಲ್ಲಿ ಹುಟ್ಟಿದವನು ಕಾಮಿ,ಭೋಗಿ, ಚೆಲುವ, ನ್ಯಾಯವಣಗಾರ, ಸೊಗಸುಗಾರ, ಗೆಳೆಯ, ೧ ಪಾದ, ಸಿಟ್ಟಿನಧಣಿ, ಚಪಲ, ೨ ಪಾದಹಿತವಾಗಿ ಮಾತಾಡುವನು, ೩ ಪಾದ, ವಿದ್ಯಾಕೀರ್ತಿ ಶೌರ್ಯಗಳುಳ್ಳವನು, ೪ ಪಾದ, ಪರಾಕ್ರಮವೂ, ಧೈರ್ಯವೂ,ಕಳ್ಳತನವೂ ಉಂಟು, ಮೊದಲು ಕುಜದೆಶೆ ೭ ವರುಷಗಳು, ೫ನೇ ವರುಷದಲ್ಲಿ ಬೆಂಕಿಭಯ, ೮ರಲ್ಲಿ ಪಶುಗಂಡ, ೨೧ರಲ್ಲಿ ಆಯುಧಗಂಡ, ೨೫ರಲ್ಲಿ ವಿಷಕಂಟಕಭಯ, ತುಲಾ ಮಾಸದಲ್ಲಿ ಶುಕ್ಲಪಕ್ಷ ದಶಮಿಭಾನುವಾರಕೂಡಿದರೆ ಸನ್ನಿಪಾತದಿಂದ ಅಪಮೃತ್ಯು,ಇದು ಕಳೆದುಳಿದರೆ೮೦ವರುಷಪರಮಾಯುಷ್ಯ, ಇದರಲ್ಲಿ ಹುಟ್ಟಿದ ಮೊಗುವನ್ನು ೬ ತಿಂಗಳತನಕತಂದೆಯು ಮುಖ ನೋಡಬಾರದು. ಅಥವಾ ಶಾಂತಿ ಮಾಡಿದಮೇಲೆ ನೋಡಬಹುದು. ಇಂತು ಚಿತ್ತ ನಕ್ಷತ್ರವಿಚಾರವು. ... *

---

ಸ್ವಾತೀ ನಕ್ಷತ್ರಕ್ಕೆ ೧೫,

ಶ್ಲೋ॥ ಸಸ್ಯೋದ್ಯಾನಪುರಾಮರಾಲಯನೃಪಪ್ರಾಸಾದಸಂಸ್ಥಾಪನಂ । ಡೋಲಾಂದೋಳನಕಾಸನೋಪ್ತಿತುರಗ ಸ್ತಂಭಂರಥಾರೋಹಣಂ। ವಿದ್ಯಾ

ರಂಭವಿವಾಹಪುಷ್ಟೀಕರಣಂ ಸೀಮಂತಮೌಂಜೀವ್ರತಂ। ನಾನಾವಸ್ತ್ರವಿಭೂಷಣಾಂಗರಚನಾಂ ಪ್ರಾಹುರ್ಬುಧಾ ವಾರುತೇ॥ ರೂ—ರೇ—ರೋ—ತಾ—ಸ್ವಾತಿ ರಕ್ತವರ್ಣಃ। ಏಕತಾರಾ। ಮಾಣಿಕ್ಯಾಕೃತಿಃ। ದೇವಗಣಃ। ಯೋನಿರ್ಮಹಿಷಃ। ವಾಯುರ್ದೇವತಾ ಉಗ್ರಸ್ವಭಾವಃ। ಚತುಷ್ಪಾನ್ನಕ್ಷತ್ರಂ। ತಿರ್ಯಙ್ಮುಖಂ ಊರ್ಧ್ವಲೋಚನಂ। ಸೂರ್ಯತಾರಾ। ಅಕಾರಸ್ವರಃ। ಸ್ಥಾನಂ ಶೂನ್ಯಂ। ವಾಯುಮಂಡಲಂ। ಅರ್ಜುನವೃಕ್ಷಃ। ಪಕ್ಷೀ ವೈನತೇಯಃ। ಪುರುಷಃ। ಚತುರ್ದಶ ಘಟಿಕಾನಂತರಂ ವಿಷನಾಡ್ಯಃ। ಅಸ್ಮಿನ್ನಕ್ಷತ್ರೇ ಮೌಕ್ತಿಕ ಮಣಿರ್ಜಾತಃ। ಯಾತ್ರಾವರ್ಜಿತಾ। ಆದೌ ಚತುರ್ದಶ ಘಟಿಕಾಪರಂ ಅಮಲಕಭುಕ್ತಂ ಚೇತ್ ದಕ್ಷಿಣಾಪಶ್ಚಿಮಪ್ರಯಾಣೇ ಶುಭಂ। ಜ್ವರೇ ಪ್ರಾಣಭಯಂ। ಅಥವಾ ಮಾಸಾರಿಷ್ಟಂ। ತಚ್ಛಾಂತಿಃ। ಕೃಷ್ಣವರ್ಣಂ। ದ್ವಿಭುಜಂ। ಪಾಶಪಾಣಿಂ। ವಾಯುಂ ದೇವತಾಂ। ಕೃಷ್ಣಪ್ರತಿಮಾಯಾಮಾವಾಹಯೇತ್। ಕೃಷ್ಣಾಗರುಗಂಧಂ। ದವನಪುಷ್ಪಂ ಕೃಷ್ಣಾಗರುಧೂಪಂ। ದಧ್ಯೋದನನ್ನೈವೇದ್ಯಂ। ತವವಾಯ-ರಿತಿ ಮಂತ್ರೇಣ ಷೋಡಶೋಪಚಾರ ಪೂಜಾಂ ಕುರ್ಯಾತ್। ಸಲಾಜಾಜ್ಯೇನ ಗಾಯತ್ರ್ಯಾಷ್ಟೋತ್ತರಶತಂ ಜುಹುಯಾತ್। ಗಂಧಮಾಲ್ಯ ದಧ್ಯೋದನೇನ ಉತ್ತರಸ್ಯಾಂ ದಿಶಿ ಬಲಿಂ ಹರೇತ್ ಮಾಸಾತ್ಸುಖೀ ಭವತಿ। ಅಥ ತಿಥಿವಾರಯೋಗಾತ್ಫಲಾನಿ। ಆದಿವಾರೇ ಮೃತ್ಯುಯೋಗಃ। ಸೋಮೇ ಸಿದ್ಧಯೋಗಃ। ಭೌಮೇ ನಂದಾಸುವರಯೋಗಃ। ಬುಧೇ ಸುಧಾಂಶುಯೋಗಃ। ಗುರೌ ಅಮೃತ್ಯುಯೋಗಃ। ಭೃಗೌ ಯಮಕಂಟಕಯೋಗಃ। ಶನೌ ಸಿದ್ಧಯೋಗಃ। ನಂದಾಸು ನಿರ್ಜೀವಯೋಗಃ। ಶತಭಿಷನ್ನಕ್ಷತ್ರೇ ಕ್ರೂರಗ್ರಹಸ್ಥಿತೇ ಸತಿ ಮಹಾಶೂಲಯೋಗಃ। ವೈಶಾಖಮಾಸೇ ಶೂನ್ಯಂ। ಅಸ್ಮಿನ್ನುತ್ಪಾತದರ್ಶನೇ ಸತಿ ವಾಯುಭಯಂ। ರವಿಸಂಕ್ರಮಣೇ ಮಧ್ಯಾರ್ಘಃ। ಪ್ರಥಮರಜಸ್ವಲಾ ಕನ್ಯಾ ಸನ್ಮಾರ್ಗವರ್ತಿನೀ ಸೌಭಾಗ್ಯವತೀ ಭವತಿ। ಸ್ತ್ರೀಸಂಭೋಗನಾಮಕರಣಾನ್ನಪ್ರಾಶನ ಚೌಲೋಪನಯನ ಕ್ಷೌರಕರ್ಮಾಕ್ಷರಗ್ರಹಣ ಜ್ಯೋತಿಷ ವೇದಶಾಸ್ತ್ರಾಭ್ಯಾಸ ಸಮಾವರ್ತನ ವಿವಾಹ ತೈಲಾಭ್ಯಂಗ ನವವಸ್ತ್ರ ಮೌಕ್ತಿಕಾಲಂಕಾರ ನೃತ್ತಗೀತ ವಾದ್ಯಾರಂಭ ಗಜಾಶ್ವಾಂಡೋಳಿಕಾರೋಹಣ ಕೃಷಿಪ್ರಾರಂಭ ಬೀಜಾವಾಪನೇತ್ಯಾದಿ ಶುಭಕಾರ್ಯೇಷು ಪ್ರಶಸ್ತಂ। ಅಥ ಜಾತಸ್ಯ ಗುಣಾಃ। ದಾತಾ। ಸೌಭಾಗ್ಯವಾನ್। ಧೈರ್ಯವಾನ್। ದೀರ್ಘತನುಃ। ವಿಶಾಲಾಕ್ಷಃ। ವಿಕಸಿತಹೃದಯಃ। ವಿಖ್ಯಾತಿಮಾನ್। ಬಹುಭೋಗವಾನ್। ದ್ವಿಜದೇವಗುರುಪೂಜಾರತಃ। ಬಂಧುಜನಪ್ರಿಯಃ।

ಬುದ್ಧಿವರ್ಾ। ಅಲ್ಪೋದರಃ। ಸ್ವತಂತ್ರಃ। ಅಂಶಗುಣಾಃ। ಪ್ರಥಮಪಾದಸ್ಯ ಗುರುಃ ಉತ್ಪನ್ನಾಂಶಃ। ಸದಾಧೀರಃ। ಸರ್ವಜ್ಞಃ। ವಾಚಾಲಕಃ। ದ್ವಿತೀಯಪಾದಸ್ಯಶನಿಃ। ಧನಾಂಶಃ। ಕೃತಜ್ಞಃ । ದುರ್ನೀತಿವರ್ಾ । ತೃತೀಯಪಾದಸ್ಯಮಂದಃ। ಉಗ್ರಾಂಶಃ। ಶತ್ರುದ್ವೇಷಿ। ಮಾರ್ಾಕೋಪಿ। ಧನವ್ಯಯಕರಃ। ಚತುರ್ಥಪಾದಸ್ಯಗುರುಃ। ಉತ್ಕೃಷ್ಟಾಂಶಃ। ಸರ್ವಜನಪ್ರಿಯಃ। ರೋಷಯುತಃ। ಗುರು ಪೂಜಾರತಃ। ಧನವಾನ್। ಅಸ್ಯಜಾತಸ್ಯರಾಹೋರ್ಮಹಾದಶಾ। ಅಷ್ಟಾದಶವರ್ಷಾಣಿ। ಜನನಾದ್ವ್ಯಷ್ಟಮದಿನೇ ಮಾಂದಜ್ವರಭಯಂ । ಚತುರ್ಥವರ್ಷೇವಾತಜ್ವರಭಯಂ। ಅಷ್ಟಮವರ್ಷೇ ರೋಗಭಯಂ। ದ್ವಾದಶವರ್ಷೇಅಪಮೃತ್ಯುಭಯಂ। ತ್ರಿಂಶದ್ವರ್ಷೇ ವಾತಜ್ವರಭಯಂ। ಪಂಚಚತ್ವಾರಿಂಶದ್ವರ್ಷೇಅಪಮೃತ್ಯುಃ । ಅಸ್ಮಿನ್ಪರಿಹೃತೇ ಸತಿನವತಿವರ್ಷಾಣೀಪರಮಾಯುಃ। *

ತಾತ್ಪರ್ಯ। ಹವಳದ ಹಾಗೆ ಅಥವಾ ಮಾಣಿಕ್ಯದಂತೆ ಕೆಂಬಣ್ಣವಾಗಿ ಹೊಳೆಯುತ್ತಿರುವ ನಕ್ಷತ್ರವು ಸ್ವಾತಿ ಎಂಬ ಹೆಸರುಳ್ಳದ್ದು , ಇದಕ್ಕೆ ವಾಯುದೇವತೆ, ಇದು ಚರನಕ್ಷತ್ರವು , ಇದರಲ್ಲಿ ಹೋದವಡಿವೆ ಶಿಕ್ಕೋದಿಲ್ಲ , ಇದರಲ್ಲಿ ಮಾಡಿದ ಕೆಲಸಗಳು ಜಾಗ್ರತೆಯಾಗಿ ನೆರವೇರುವವು , ಇದರಲ್ಲಿ ಸೂರ್ಯನಿರುವಾಗ ಸುರಿದ ಮಳೆಯ ಹನಿಗಳು ಸಮುದ್ರದಲ್ಲಿ ಮುತ್ತುಗಳಾಗಿ ಪರಿಣಮಿಸುತ್ತವೆ , ಇದು ಪ್ರಯಾಣಕ್ಕೆ ಒಳ್ಳೇದಲ್ಲ , ಅತ್ಯಾವಶ್ಯಕವಾಗಿದ್ದರೆ ನೆಲ್ಲಿಕಾಯನ್ನು ಸವಿದು ಟೆಂಕಲಿಗೂ ಪಡುವಲಿಗೂ ಪಯಣವಾಗಬಹುದು, ಇದರಲ್ಲಿ ಜ್ವರ ತಗಲಿದರೆ ಬಹಳ ಕಷ್ಟ , ವಾಯುದೇವರಿಗೆ ಶಾಂತಿ ಮಾಡಿ ಮದ್ದು ತಕ್ಕೊಂಡರೆ ಒಂದು ತಿಂಗಳಿಗೆ ಚನ್ನಾಗಿ ಆರೋಗ್ಯ ವಾದೀತು. ಈ ನಕ್ಷತ್ರದಿಂದ ಉಂಟಾಗುವ ಯೋಗ ಫಲಗಳು ಯೋಗದ ಹೆಸರಿಗೆ ತಕ್ಕಹಾಗಿರುವವು , ಈ ನಕ್ಷತ್ರಕ್ಕೆ ಚಂದ್ರನು ಬಂದಾಗ ಉತ್ಪಾತ ಮಾಡಿದರೆ ಮಳೆ ಬರುತ್ತೆ, ಸೂರ್ಯ ಸಂಕ್ರಮಣವಾದರೆ ಧಾನ್ಯಯಡವಟ್ಟು, ವೈಶಾಖ ಶುದ್ಧ ಪಾಡ್ಯಮಿಯಾಗಿದ್ದರೆ ಅದು ಶೂನ್ಯದಿವಸವಾಗುವದು, ಸ್ವಾತಿಯಲ್ಲಿ ಮೈನೆರದರೆ ಸೌಭಾಗ್ಯವತಿಯಾಗುವಳು, ಬುಂತು ಶಾಂತಿ ಪ್ರಸ್ತ, ಮೊಗುವಿಗೆ ಹೆಸರಿಡುವಿಕ್ಕೆ, ಅನ್ನವಿಡೋಣವು , ಹುಟ್ಟುಕೂದಲು ತೆಗಿಸುವಿಕೆ, ಚೌಡಿಕೆ , ಬಿಡಿಸುವಿಕೆ, ಕ್ಷೌರ, ಅಕ್ಷರಾಭ್ಯಾಸ, ವಿದ್ಯಾಭ್ಯಾಸ, ಶಾಸ್ತ್ರಾಧ್ಯಯನ , ವೇದವ್ರತ , ಸ್ನಾತಕ , ಮದುವೆ ನೀರೆರಕೊಳ್ಳುವಿಕೆ, ಹೊಸಬಟ್ಟೆ ಉಡುವಿಕೆ, ಹೊಸವಡವೆಯನ್ನು ಇಟ್ಟುಕೊಳ್ಳುವಿಕೆ, ನೃತ್ಯಗೀತ

ವಾದ್ಯಾರಂಭ, ವಾಹನ ರಥಾರೋಹಣ, ನೆಲವನ್ನು ಗೆಯ್ಯಿಸುವಿಕೆ, ಬಿತ್ತನ ಹಾಕುವಿಕೆ, ಹಗೇವು ತೆಗಿಯುವಿಕೆ, ಜೀನಸು ವಣಹಾಕುವಿಕೆ, ಉಪ್ಪಿನಕಾಯಿ ಮೂರಿಸುವಿಕೆ, ವಡಿವೆ ಮಾಡಿಸುವಿಕೆ, ವ್ಯಾಪಾರ ನಡಿಸುವಿಕೆ, ಇವುಗಳಿಗೆ ವಳ್ಳೇದು, ಈ ನಕ್ಷತ್ರದಲ್ಲಿ ಹುಟ್ಟಿದವನು ಧಾರಾಳಿ, ಭಾಗ್ಯವಂತ, ಧೈರ್ಯಶಾಲಿ, ಉದ್ಧವಾದವನು, ಅಗಲವಾದ ಕಂಣುಗಳುಳ್ಳವನು, ಹೆಸರುವಾಸಿಯುಳ್ಳವನು, ಸುಖಪಡುವನು, ದೇವರನ್ನು ಆರಾಧಿಸಿ ಗುರುಗಳನ್ನು ಪೂಜಿಸಿ ಬಂಧುಗಳನ್ನು ಸತ್ಕರಿಸಲುಳ್ಳವನು, ಬುದ್ಧಿವಂತ, ಸ್ವತಂತ್ರವಾಗಿ ಬದುಕುವನು, ೧ ನೇ ಪಾದದಲ್ಲಿ ಮಾತುಗಳೂ ಬುದ್ಧಿಯೂ ಸಾಟಿಯಾಗಿರುವವು, ೨ ನೇ ಪಾದದಲ್ಲಿ ಹೊನ್ನುಳ್ಳವನಾಗಿ ದುರಾಲೋಚನೆ ಗಯ್ಯುವನು, ೩ ನೇ ಪಾದದಲ್ಲಿ ಮೂರ್ಖನಾಗಿ ಸಿಟ್ಟುಗೊಂಡು ಶತ್ರುಗಳನ್ನು ದ್ವೇಷಿಸಿ ಹಣ ಕಳಕೊಳ್ಳುವನು, ೪ ನೇ ಪಾದದಲ್ಲಿ ಕೋಪಿಷ್ಠನಾದರೂ ವಳ್ಳೇಯವನೆನ್ನಿಸಿಕೊಂಡು ಗುರು ಹಿರಿಯರನ್ನು ಪೂಜಿಸಿ ಧನವಂತನಾಗಿ ಬಾಳುವನು, ಮೊದಲು ರಾಹುದಶೆ ೧೮ ವರುಷ, ಅದರಲ್ಲಿ ನಕ್ಷತ್ರದ ಏಷ್ಯಕಾಲಕ್ಕೆ ತಕ್ಕ ದಾಮಾಷಾಪ್ರಕಾರ ಬಾಕಿ ಇರುತ್ತೆ. ೪ನೇ ದಿನ ವರುಷ, ೮ನೇ ದಿನ, ವರುಷ, ರೋಗಕಾಲಗಳು. ೧೨ ನೇ ವರುಷದಲ್ಲಿ ಅಪಮೃತ್ಯು, ೩೦ ಕಾಯಿಲೆ, ೪೫ ಅಪಮೃತ್ಯು, ಜಾತಕಗ್ರಹ ಬಲದಿಂದ ಇದೆಲ್ಲಾ ಕಳದರೆ ೯೦ ವರುಷ ಬದುಕ ಬಹುದು. ಇಂತು ಸ್ವಾತೀ ನಕ್ಷತ್ರ ವಿಚಾರವು. *

—*(ವಿಶಾಖಾ ನಕ್ಷತ್ರಕ್ಕೆ ೧೬.)*—

ಶ್ಲೋ॥ ಕೃಷಿರ್ಬೀಜಾವಾಪನಂಚ। ಮಹಾಬಿಲನಿವೇಶನಂ। ವಾಪೀಕೂಪತಟಾಕಾಶ್ಚ। ನಿಕ್ಷೇಪಾದಿರ್ವಿಶಾಖಭೇ॥ ಮಣಿಮಯಕನಕಾ ಕಲ್ಪ ಕ್ರಿಯಾನಲ್ಪ ವಿದ್ಯಾಭ್ಯಾಸನಜಪಲಿಪಿನಾಂ ಭೋಜ್ಯಪಾಕಸ್ಯಕರ್ಮ। ಶಿಲಹತಿ ಮಪಿಯಜ್ಞಂ ಧಾತುವಾದಂಚಿಕಿತ್ಸಾಂ ಸಮುಚಿತಮಿದಮಾಹುರ್ಯದ್ವಿಶಾಖಾಸುಸಂತಃ॥ ತೀ—ತೂ—ತೇ—ತೋ—ವಿಶಾಖಾ। ರಕ್ತವರ್ಣಃ। ಪಂಚತಾರಾ। ಕುಲಾಲ ಚಕ್ರಾಕೃತಿಃ। ಪುಮಾನ್। ರಾಕ್ಷಸಗಣಃ। ಕನಕವೃಕ್ಷಃ। ಯೋನಿರ್ವ್ಯಾಘ್ರೀ। ಇಂದ್ರಾಗ್ನೀದೇವತೆ। ಉಗ್ರಜಾತಿಃ। ತ್ರಿಪಾನ್ನಕ್ಷತ್ರಂ। ಅಧೋಮುಖಂ। ಅಂಧಕಲೋಚನಂ। ಉಕಾರಾಕ್ಷರಸ್ವರಃ। ಪಕ್ಷೀ ಉಲೂಕಃ। ಚತುರ್ದಶಘುಟಿಕಾನಂತರಂ ವಿಷನಾಡ್ಯಃ। ಯಾತ್ರಾ

ವರ್ಜಂ। ಅಥವಾ ಚತುರ್ದಶಘಟಿಕಾನಂತರಂ ಲಾಜಪಿಷ್ಟಾನ್ನಂ ಭುಕ್ತಂಚೇತ್ ಪೂರ್ವೋತ್ತರಪ್ರಯಾಣೇ ಶುಭದಂ । ಆದಿತ್ಯ ಶನಿ ಮಂಗಳ ಪ್ರತಿಪಚ್ಚತುರ್ಥೀ ಷಷ್ಠ್ಯಷ್ಟಮೀದ್ವಾದಶೀಯುಕ್ತ ವಿಶಾಖಾ ನಕ್ಷತ್ರೇ ಜ್ವರಾರಂಭೇ ಸತಿ ಪ್ರಾಣಭಯಂ । ಅಥವಾ ಪಂಚದಶದಿನಾನ್ಯರಿಷ್ಟಾನಿ । ತಚ್ಛಾಂತಿಃ । ರಕ್ತವರ್ಣಾಂ। ಗಜಾರೂಢಾಂ। ಚತುರ್ಭುಜಾಂ ಪಾಶಾಂಕುಶಪಾಣಿಂ। ಇಂದ್ರಾಗ್ನಿದೇವತಾಂ। ಸ್ವರ್ಣಪ್ರತಿಮಾಯಾಮಾವಾಹಯೇತ್। ಕುಂಕುಮಗಂಧಂ। ಶತಪತ್ರಪುಷ್ಪಂ। ದೇವದಾರುಧೂಪಂ। ಗುಡಪಾಯಸಾನ್ನನೈವೇದ್ಯಂ ಇಂದ್ರಾಗ್ನಿಮಂತ್ರೇಣ ಷೋಡಶೋಪಚಾರ ಪೂಜಾಂಕುರ್ಯಾತ್। ಕ್ಷೀರೋದನೇನಗಾಯತ್ರ್ಯಷ್ಟೋತ್ತರ ಶತಂಜುಹುಯಾತ್ । ಗಂಧಮಾಲ್ಯ ಗುಡಪಾಯಸಾನ್ನೇನ ಉತ್ತರಸ್ಯಾಂ ದಿಶಿಬಲಿಂಹರೇತ್ । ಪಂಚದಶದಿನೈಸ್ಸುಖೀಭವತಿ । ಅಥ ತಿಥಿವಾರಯೋಗಾತ್ಫಲಹಾನಿ। ಆದಿವಾರೆ ಉತ್ಪಾತಯೋಗಃ। ಸೋಮೆ ಏಕಾದಶ್ಯಾಂತ್ರಿಪುಷ್ಕರಯೋಗಃ। ಯಮದಂಷ್ಟ್ರಯೋಗಶ್ಚ । ಕುಜೆದಗ್ಧಯೋಗಃ। ಬುಧೆ ನಾಶಯೋಗಃ। ಗುರೌ ಆನಂದಯೋಗಃ । ಶುಕ್ರೆ ಮೃತ್ಯುಯೋಗಃ। ಶನೌಸಿದ್ಧಯೋಗಃ। ಚತುರ್ಥ್ಯಾಂ ಕಟಕಲಗ್ನೇವರಯೋಗಃ। ಆಗ್ನೇಯಭಾಗೆ ಉತ್ಪಾತದರ್ಶನೇಸತಿ ದುರ್ಭಿಕ್ಷಾಗ್ನಿಭಯಂ। ರವಿಸಂಕ್ರಮಣೇಮಧ್ಯಾರ್ಘಃ। ಅಸ್ಮಿನ್ನಕ್ಷತ್ರೇ ಪ್ರಥಮ ರಜಸ್ವಲಾಕನ್ಯಾಸೌಭಾಗ್ಯ ಪುತ್ರವತೀ ಭವತಿ। ಕೃತ್ತಿಕಾನಕ್ಷತ್ರೇ ಕ್ರೂರಗ್ರಹಸ್ಥಿತೇ ಸತಿಮಹಾಶೂಲಯೋಗಃ। ಕೃಷಿಬೀಜಾವಾಪನ ನಿಕ್ಷೇಪ ವಾಪೀಕೂಪ ತಟಾಕಪರಿಘಾಶಿಲ್ಪಾಭರಣ ಕ್ರಿಯಾಗ್ನಿಕಾರ್ಯ ರಸವಾದ ಧಾತುವಾದ ಯಂತ್ರಸ್ಥಾಪನ ಮಂತ್ರಜಪಾಕ್ಷರ ವಿದ್ಯಾಭ್ಯಾಸ ಚುಲ್ಲೀಕರಣದ್ರಾವಕರಸ ಪಾಕಂಗಾಲಾದಿ ದಹನದೀರ್ಘಜಾಡ್ಯ ಚಿತ್ಸಾ ಯಜ್ಞಾದಿಕಾರ್ಯೇಷುಪ್ರಶಸ್ತಂ ಅಸ್ಮಿನ್ಜಾತಸ್ಯಗುಣಾಃ। ವಿಮಪಾಂಪ್ರಿಯಕರಃ। ವಿನಯಸಂಪನ್ನಃ। ದೀರ್ಘಜೀವೀ । ಧನಾಢ್ಯಃ। ಸರ್ವಕಾರ್ಯನಿಪುಣಃ । ಬಂಧುವರ್ಗೋಪಕಾರೀ। ಬಹುಗುಣವಾನ್। ಸ್ಪಷ್ಟಭಾಷೀ। ಕ್ಷಿಪ್ರರೋಗೀ। ಸ್ತ್ರೀಪ್ರಿಯಃ। ರಕ್ತಲೋಚನಃ ವಕ್ತ್ರಗುಹ್ಯಸ್ಥಾನೇಷುತಿಲಕಮತ್ಸ್ಯಾಂಕಿತಃಅಥಅಂಶಗುಣಾಃಪ್ರಥಮಪಾದಸ್ಯಕುಜಃ ಸೌಖ್ಯಾಂಶಃ। ಪೀನವಕ್ಷಾಃ। ರಕ್ತಲೋಚನಃ। ಧನವಾನ್। ದ್ವಿತೀಯಪಾದಸ್ಯಶುಕ್ರಃಭೋಗಾಂಶಃ। ನ್ಯಾಯಾರ್ಜನಪರಃ। ಸುಖೀ। ರೂಪಸೌಂದರ್ಯಕಳತ್ರವಾನ್। ಕರ್ಣರೋಗೀ । ತೃತೀಯಪಾದಸ್ಯಬುಧಃ। ಸೌಮ್ಯಾಂಶಃ। ವಿಚಕ್ಷಣಃ। ದಾನವಾನ್। ನಿಪುಣಃ। ಆಂಧ್ಯರೋಗೀ। ಚತು

ರ್ಥಪಾದಸ್ಯಚಂದ್ರಃ। ಅಥಾಂಶಃ। ಸ್ತ್ರೀಪ್ರಿಯಃ । ಅಂತರೋಗಿ। ಅಸ್ಯಜಾತಸ್ಯ ಗುರೋರ್ಮಹಾದಶಾ। ಷೋಡಶವರ್ಷಾಣಿ । ಪಂಚಮವರ್ಷೇ ನೇತ್ರರೋಗಃ । ತ್ರಯೋದಶವರ್ಷೇವಾತವೈದ್ಯಜ್ವರಭಯಂ। ತ್ರಯಸ್ತ್ರಿಂಶದ್ವರ್ಷೇಶಸ್ತ್ರಭಯಂ। ಧನುರ್ಮಾಸೇಭಾನುವಾಸರೆ ಶುಕ್ಲ ಪಕ್ಷ ಚತುರ್ದಶ್ಯಾಂವಿಶಾಖಾ ನಕ್ಷತ್ರೇ ಸೂರ್ಯೋದಯಾತ್ಪರಂಚತುರ್ದಶಘಟಿಕಾಸಮಯೆ ಕುಕ್ಷಿರೋಗೇಣಾಪಮೃತ್ಯುಃ। ಅಸ್ಮಿನ್ಪರಿಹೃತೇ ಸತಿಸಪ್ತ ನವತಿವರ್ಷಾಣಿ ಪರಮಾಯುಃ॥

ತಾತ್ಪರ್ಯ। ಕುಂಬಾರನ ಚಕ್ರದ ಹಾಗೆ ೫ ಚುಕ್ಕೆಗಳು ವಿಶಾಖಾ ನಕ್ಷತ್ರ, ಇದಕ್ಕೆ ಇಂದ್ರನು, ಅಗ್ನಿಯು, ದೇವತೆಗಳು ,ಇದರಲ್ಲಿ ಹೋದ ವಡಿವೆ ಬೇಗ ಶಿಕ್ಕುತ್ತೆ, ಪ್ರಯಾಣ ಮಾಡ ಕೂಡದು, ಜ್ವರ ಬಂದರೆ ಬಹಳ ಕ್ರೂರ,ಇಂದ್ರಾಗ್ನಿ ಶಾಂತಿ ಮಾಡಿದರೆ ೧೫ ದಿನಗಳಿಗೆ ಆರೋಗ್ಯವಾಗುವದು, ನೆಲಗೆಯ್ಯುವಿಕೆ, ಬಿತ್ತನೆ, ನಿಕ್ಷೇಪ ಕೀಳುವಿಕೆ, ಹಗೇವಿನಲ್ಲಿ ಧಾನ್ಯಹಾಕುವಿಕೆ,ಭಾವಿೊ ತೋಡಿಸುವದು, ಕೆರೆ ಕಟ್ಟಿಸುವದು, ಕಾಲ್ವೇ ಅಗಿಸುವದು, ಕೂಲಿ ಕೆಲಸ ಮಾಡಿಸುವದು, ವಡಿವೆ ಮಾಡಿಸುವದು , ಸುಣ್ಣ, ಇದ್ದಲು, ಮಡಿಕೆ, ಇಟ್ಟಿಕೆ, ಲೋಹಗಳು, ಇಂಥವುಗಳನ್ನು ಸುಡಿಸುವದು, ವಿದ್ಯ ಕಲಿತು ಕೊಳ್ಳುವದು , ಮದ್ದು ಮಾಡಿಸುವದು, ದ್ರಾವಕ ಇಳಿಸುವದು,ಹೊಸ ವಲೆ ಹಾಕುವದು,ಮಂತ್ರವನ್ನು ಜಪಿಸುವದು, ಹೊಸ ಕಟ್ಟಳೆಯನ್ನು ನಿರ್ಣಯಿಸುವದು,ಹಳೇ ರೋಗಕ್ಕೆ ಮದ್ದು ಕೊಡುವದು, ಯಜ್ಞಮಾಡುವದು ಮುಂತಾದ ಕೆಲಸಗಳಿಗೆ ಒಳ್ಳೇದು, ಈ ನಕ್ಷತ್ರದಲ್ಲಿ ಹುಟ್ಟಿದವನು, ವಿದ್ಯೆ,ವಿನಯ,ಆಯುಷ್ಯ, ಧನ, ಉಪಕಾರ, ಸುಗುಣವುಳ್ಳವನು, ಆಗಾಗ್ಯೆ ರೋಗ ಪಡುತ್ತಾನೆ, ಸ್ತ್ರೀಲೋಲನಾಗಿರುವನು, ೧ನೇ ಪಾದ ಧನಸುಖವಂತ, ೨ನೇ ಪಾದ ಧನವನ್ನು ಆರ್ಜಿಸಿ ಕುಟುಂಬದೊಂದಿಗೆ ಭೋಗಪಡುವನು , ೩ನೇ ಪಾದ ಚತುರನಾಗಿಯೂ, ಧಾರಾಳಿಯಾಗಿಯೂ ಕಣ್ಣು ನೋವುಳ್ಳವನಾಗಿಯೂ, ಇರುವನು. ೪ನೇಪಾದ ಭಾಗ್ಯವಂತನಾಗಿ ಭೋಗಪಟ್ಟು ವಾತಿಯಾಗದ ರೋಗ ವುಳ್ಳವನಾಗುವನು , ಆದಿಯಲ್ಲಿ ಗುರುದಶೆ ೧೭ ವರುಷ, ೫—೧೩—೩೩ ಈ ವರುಷಗಳು ಗಂಡಕಾಲ ಶುಕ್ಲಪಕ್ಷದಲ್ಲಿ ಚತುರ್ದಶೀ ಭಾನುವಾರ ವಿಶಾಖಾ ನಕ್ಷತ್ರ ಕೂಡಿದರೆ ಮಧ್ಯಾಹ್ನದ ಹೊತ್ತಿನಲ್ಲಿ ಹೊಟ್ಟೆನೋವಿನಿಂದ ಹಾನಿ ಬಂದೀತು. ಅದು ಕಳೆದುಳಿದರೆ ಆಯುರ್ಯೋಗವಿದ್ದಲ್ಲಿ ೯೭ ವರುಷದ ತನಕಾ ಬದುಕುವನು ಇಂತು ವಿಶಾಖಾ ನಕ್ಷತ್ರ ವಿಚಾರವು. ... ❋

ಅನೂರಾಧಾ ನಕ್ಷತ್ರಕ್ಕೆ ೧೭.

ಶ್ಲೋ॥ ಚಿತ್ರಕ್ರಿಯಾಕನಕರತ್ನಪರೀಕ್ಷಣಾ ಪ್ತಿರಾರೋಹಣಂ ತುರಗಗೋಖರಕುಂಜರಾಣಾಂ । ಚೂರ್ಣಪ್ರಯೋಗನಯನಾಂಜನಭೇಷಜಾನಿ ಯಾತ್ರಾವಿವಾಹಶುಭಪೌಷ್ಟಿಕಕರ್ಮಮೈತ್ರೇ॥ ನಾ—ನೀ—ನೂ—ನೆ ಅನೂರಾಧಾ। ಶ್ವೇತವರ್ಣಃ। ಪಾರ್ಶ್ವಮುಖಂ । ಮಂದಲೋಚನಂ। ಪುರ್ವಾ । ಚಂದ್ರನಕ್ಷತ್ರಂ। ಮೃದುತಾರಾ। ಪಟ್ಟಣಸ್ಥಾನಂ। ಇಂದ್ರಮಂಡಲಂ। ಪನಸವೃಕ್ಷಃ । ಪಕ್ಷಿ ಶುಕಃ। ಅಕಾರಾಕ್ಷರಃ। ಚತುಷ್ಪಾತ್। ಬಿಸಪುಷ್ಪಾಕೃತಿಃ । ತ್ರಿತಾರಾ। ದೇವಗಣಃ। ಶೂದ್ರಜಾತಿಃ। ಯೋನಿರ್ಹರಿಣೀ। ಮಿತ್ರೋದೇವತಾ। ಅಸ್ಮಿನ್ನಕ್ಷತ್ರೇ ನಂದೋಜಾತಃ। ದಶಘಟಿಕಾನಂತರಂ ವಿಷನಾಡ್ಯಃ। ಯಾತ್ರಾಯಾಂಕುಳುತ್ಥ ಭಕ್ಷಣಂಚೇತ್ ಸರ್ವದಿಕ್ಷುಪ್ರಯಾಣೇಶುಭದಂ। ಜ್ವರೇಪ್ರಾಣಭಯಂ । ಅಥ ಮಾಮಾಸಾರಿಷ್ಟಂ। ತಚ್ಛಾಂತಿಃ ರಕ್ತವರ್ಣಂ ಚತುರ್ಭುಜಂ । ಪದ್ಮಾಭಯಪಾಣಿಂ ಪದ್ಮಾಸನಸ್ಥಂ। ಮಿತ್ರಂದೇವತಾಂ । ಕುಂಕುಮವಸ್ತ್ರಸಹಿತಸ್ವರ್ಣಪ್ರತಿಮಾಯಾಮಾವಾಹಯೇತ್ । ಕುಂಕುಮಗಂಧಂ । ಕದಳೀಪುಷ್ಪಂ। ಬಿಲ್ವಧೂಪಂ। ಕೃಸರಾನ್ನನೈವೇದ್ಯಂ। ದೇವಸ್ಯತ್ವೇತಿಮಂತ್ರೇಣ ಷೋಡಶೋಪಚಾರ ಪೂಜಾಂಕೃತ್ವಾ। ಕಂದಮೂಲಫಲಕೃಸರಾನ್ನಾಜ್ಯೇನಗಾಯತ್ರ್ಯಾಷ್ಟೋತ್ತರಶತಂಜುಹುಯಾತ್।ಗಂಧಮಾಲ್ಯಕೃಸರಾನ್ನೇನೋಂತರಸ್ಯಾಂದಿಶಿಬಲಿಂಕುರ್ಯಾತ್ । ಮಾಸಾತ್ಸುಖೀಭವತಿ। ಅಥತಿಥಿವಾರಯೋಗಾತ್ಫಲಾನಿ । ಆದಿವಾರೆ ಮೃತ್ಯುಯೋಗಃ। ಸೋಮೆ ದಗ್ಧಯೋಗಃ। ಕುಜೆ ಯಮಕಂಟಕಯೋಗಃ। ಬುಧೆ ಅಪಮೃತ್ಯುಯೋಗಃ। ಸಪ್ತಮ್ಯಷ್ಟಮ್ಯಾಂಮೃತ್ಯುಯೋಗಃ । ಗುರೌ ವರಯೋಗಃ। ಶುಕ್ರೇರಂಧ್ರಯೋಗಃ । ಶನೌಸಿದ್ಧಯೋಗಃ । ರಿಕ್ತಾಯಾಂ ನಿರ್ಜೀವಯೋಗಃ । ಕೃತ್ತಿಕಾನಕ್ಷತ್ರೆ ಕ್ರೂರ ಗ್ರಹಸ್ಥಿತೆ ಸತಿ ಮಹಾಶೂಲ ಯೋಗಃ । ಮಾರ್ಗಶಿರ್ಷೇಶೂನ್ಯಂ । ಅಸ್ಮಿನ್ನುತ್ಪಾತದರ್ಶನೇಸತಿ ಸರ್ವ ದೇಹಿನಾಂವ್ಯಾಧಿರ್ಭವತಿ । ರವಿಸಂಕ್ರಮಣೆಮಧ್ಯಾರ್ಘಃ । ಪ್ರಥಮ ರಜಸ್ವಲಾಕನ್ಯಾಸುಪುತ್ರಧನಧಾನ್ಯಪತೀಭವತಿ । ಋತುಪುಂಸವನ ನಾಮಕರಣಾನ್ನಪ್ರಾಶನಕರ್ಣವೇದ ಚೌಲೋಪನಯನ ವೇದಶಾಸ್ತ್ರಾಭ್ಯಾಸ ಸಮಾವರ್ತನವಿವಾಹತೈಲಾಭ್ಯಂಗ ವಸ್ತ್ರಾಭರಣ ಸುವರ್ಣಸಂಗ್ರಹ ರಾಜಾಭಿಷೇಕ ರಥಾಂದೋಳನಾದ್ಯಾರೋಹಣ ಗೃಹಪ್ರವೇಶ ಬೀಜಾವಾಪಶ್ರಾದ್ಧ ಭೈಷಜ್ಯೇತ್ಯಾದಿಕಾರ್ಯೇಷು ಪ್ರಶಸ್ತಂ— ಜಾತಸ್ಯಗುಣಾಃ । ಸ್ನೇಹವಾನ್ । ದಯಾ

ಪರಃ। ಪರೋಪಕಾರೀ। ಪ್ರಜ್ಞಾವಾನ್। ಸ್ಥಿರಧನವಾನ್। ಸುಭಗಃಸನ್ಮಾರ್ಗವಾನ್। ಭೋಗಿ। ಪ್ರವಾಸೀ। ಅಲ್ಪಸುತಃ। ಕಾಂತಪ್ರಿಯಃ। ಅನ್ನದಾತಾ। ವಿಖ್ಯಾತಃ। ರಾಜಪೂಜ್ಯಃ। ಅಥಅಂಶಗುಣಾಃ। ಪ್ರಥಮಪಾದಸ್ಯರವಿಃ। ವಾಗ್ವಿನಯಸಂಪನ್ನಃ। ನೀತಿಜ್ಞಃ। ಸದಾಮಂತ್ರಶೀಲಃ। ದ್ವಿತಿಯ್ಯಪಾದಸ್ಯಬುಧಃ। ನಪುಂಸಕಾಂಶಃ। ವೀಣಾರತಃ। ಸುಪ್ರಮಾಣವಾನ್। ಮೇಧಾವೀ। ತೃತೀಯಪಾದಸ್ಯಶುಕ್ರಃ। ಅಭಯಾಂಶಃ। ಅಸ್ಥಿರವಾಕ್। ಅನುಕೂಲಕಳತ್ರಃ। ಚತುರ್ಥಪಾದಸ್ಯಕುಜಃ। ನೀಚಾಂಶಃ। ದರಿದ್ರಃ। ಅನಾಚಾರಪರಃ। ಕುತ್ಸಿತಃ। ಪರದ್ರೋಹೀ ಅಸ್ಯಜಾತಸ್ಯ ಶನೇರ್ಮಹಾದಶಾ। ಏಕೋನವಿಂಶತಿವರ್ಷಾಣಿ। ಷಾಣ್ಮಾಸಮಧ್ಯೇಗಂಡದೋಷಃ। ಸಪ್ತಮವರ್ಷೇ ಷೋಡಶವರ್ಷೇವಾ ಪೈತ್ಯಜ್ವರಭಯಂ। ಚತುಷ್ಪಾದ್ಭಯಂಚ। ಸಪ್ತತ್ರಿಂಶದ್ವರ್ಷೇ ಚತುಷ್ಷಷ್ಟಿವರ್ಷೇ ಪೈತ್ಯಗುಲ್ಮಭಯಂ। ತತ್ಪರಿಹೃತೇಸತಿ ಅಶೀತಿ ವರ್ಷಾಣಿ ಪರಮಾಯುಃ। ... ❋

ತಾತ್ಪರ್ಯ। ತಾವರೆ ಹುವ್ವಿನ ಹಾಗೆ ಮೂರು ಚುಕ್ಕೆಗಳು ಅನೂರಾಧೆ, ಇದರಲ್ಲಿ ಹೋದವಡಿವೆ ಮೂರು ದಿನಕ್ಕೆ ಶಿಕ್ಕೀತು, ಜ್ವರ ಬಂದರೆ ತಿಂಗಳು ಕ್ರೂರ, ಮಿತ್ರನಾಮಕನಾದ ಸೂರ್ಯನಿಗೆ ಶಾಂತಿ ಮಾಡಿದರೆ ಆರೋಗ್ಯವಾಗುವದು, ವೈಶ್ಯ ನೆರದರೆ ಒಳ್ಳೇದು, ಮುಂಜಿ, ಮದುವೆ, ಮುಂತಾದ ಸಕಲಕಾರ್ಯಗಳಿಗು ಬಹಳ ಒಳ್ಳೇದು, ಇದರಲ್ಲಿ ಹುಟ್ಟಿದವನು ಒಳ್ಳೇ ಮನಸ್ಸು, ಧನವೂ, ಸುಖವೂ ಉಳ್ಳವನು, ಮಕ್ಕಳು ಮಿತವಾಗಿರುವರು, ಪರಸ್ಥಳ ತಿರುಗುವನು, ದುಂದುಗಾರ, ಬಡಾಯಿಗಾರ, ಆಸ್ಥಾನದಲ್ಲಿ ಹೆಸರುವಾಸಿ ಪಡಿಯುವನು, ೧ ಪಾದ, ಆಲೋಚನಪರ, ೨ ಪಾದ, ಕುಶಲವಿದ್ಯಗಾರ, ೩ ಪಾದ, ಸುಳ್ಳಾಡಿಗೆಲ್ಲುವನು, ಅನುಕೂಲವಾದ ಹೆಂಣು ಶಿಕ್ಕುವಳು. ೪ ಪಾದ, ಬಡತನ ಮತ್ತು ಅಂತರಂಗ ಸರಿಯಿಲ್ಲ, ಆರಂಭದಲ್ಲಿ ಶನಿದಶೆ ೧೯ ವರುಷ, ೬ ತಿಂಗಳು, ೭—೧೬—೩೭—೬೪, ಈ ವರುಷಗಳಲ್ಲಿ ರೋಗತಾಪತ್ರಯ ಕಳೆದುಳದರೆ ೮೦ ವರುಷ ಆಯುಷ್ಯ, ಇಂತು ಅನೂರಾಧಾ ನಕ್ಷತ್ರ ವಿಚಾರವು, ... ... ❋

12479

---

## ಜ್ಯೇಷ್ಠಾ ನಕ್ಷತ್ರಕ್ಕೆ ೧೮.

ಶ್ಲೋ। ಅರಿನಗರವಿಘಾತಂಭೇದನಂಚೋಗ್ರಕಾರ್ಯಂ। ಕಪಟಕುಟಿಲಮಿಥ್ಯಾಸ್ನೇಹದೇಶಾಧಿಕಾರಂ। ದ್ರವಿಣಹರಣಾಪಸ್ತ್ರ್ಯಾದಾನತದ್ಬಂಧಯತ್ನಂ।

ಧನುರಸಿಮುಸಲಾದೀನಿಂದ್ರಭೇಶಸ್ತವಾಹಃ॥ ನೋ—ಯಾ—ಯೀ— ಯೂ, ಜ್ಯೇಷ್ಠಾ ರಕ್ತವರ್ಣಃ ತ್ರಿತಾರಾ। ಛತ್ರಾಕಾರಃ। ಸ್ತ್ರೀ— ಚಂದ್ರನಕ್ಷತ್ರಂ। ರಾಕ್ಷಸಗಣಃ। ಯೋನಿರ್ಹರಿಣಃ। ಇಂದ್ರೋದೇವತಾ। ಚತುಷ್ಪಾತ್ ತಿರ್ಯಙ್ಮುಖಂ। ಮಧ್ಯಲೋಚನಾ। ತೀಕ್ಷ್ಣಗುಣಃ। ಸ್ಥಾನಂಶೂನ್ಯಂ। ಪೂಗವೃಕ್ಷಃ ಪಕ್ಷೀಜಾತಕಃ। ಏಕಾಕ್ಷರಸ್ವರಃ। ಚತುರ್ದಶಘಟಿಕಾನಂತರಂ। ವಿಷನಾಡ್ಯಃ। ಅಸ್ಮಿನ್ ನಕ್ಷತ್ರೇ ಇಂದ್ರೋವಾಲೀಜಾತಃ। ಯಾತ್ರಾವರ್ಜಾತಿಲಾನ್ನಭುಕ್ತಂಚೇತ್। ದಕ್ಷಿಣಪಶ್ಚಿಮ ಪ್ರಯಾಣೇಶುಭದಂ। ಜ್ವರೇಪ್ರಾಣಭಯಂ। ಅಥವಾ ಮಾಸಾರಿಷ್ಟಾ। ತಚ್ಛಾಂತಿಃ। ಪೀತವರ್ಣಂ। ದ್ವಿಭುಜಂ। ವಜ್ರಾಂಕುಶಧರಂ। ಇಂದ್ರಂದೇವತಾಂ। ಸ್ವರ್ಣಪ್ರತಿಮಾಯಾಮಾವಾಹಯೇತ್। ಪೀತವಸ್ತ್ರಂ। ಶ್ರೀಗಂಧಂ। ಪಾಟಲಿಪುಷ್ಪಂ। ಕರ್ಪೂರಾಗರುಧೂಪಂ। ಚಿತ್ರಾನ್ನನೈವೇದ್ಯಂ। ಅಯುಂವ್ರೊವಿಶ್ವತ ಇತಿಮಂತ್ರೇಣಷೋಡಶೋಪಚಾರಪೂಜಾಂಕೃತ್ವಾ। ಚಿತ್ರಾನಾಜ್ಯೇನಗಾಯತ್ರ್ಯಷ್ಟೋತ್ತರ ಶತಂಜುಹುಯಾತ್। ಗಂಧಮಾಲ್ಯತಿಲೋದನೇನ ಪೂರ್ವಸ್ಯಾಂದಿಶಿಬಲಿಂಹರೇತ್ ಮಾಸಾತ್ಸುಖೀಭವತಿ। ಅಥತಿಥಿವಾರಯೋಗಾತ್ಫಲಾನಿ। ಆದಿವಾರೆ ರಂಧ್ರಯೋಗಃ। ಸೋಮೆ ಶುಭಯೋಗಃ। ಕುಜೆ ಮೃತ್ಯುಯೋಗಃ। ಬುಧೆಸೌಮ್ಯಯೋಗಃ। ಗುರೌಪ್ರತಿಪದಿವಿಷಯೋಗಃ। ಭೃಗೌ ನಾಶಯೋಗಃ। ಶನೌಸಿದ್ಧಯೋಗಃ। ನಂದಾಯಾಂ ನಿರ್ಜೀವಯೋಗಃ। ಪುಷ್ಯೇಕ್ರೂರಗ್ರಹಸ್ಥಿತೇಸತಿಮಹಾಶೂಲಯೋಗಃ। ಫಾಲ್ಗುಣಮಾಸೇಶೂನ್ಯಂ। ಅಸ್ಮಿನ್ನುತ್ಪಾತದರ್ಶನೇಸತಿ ಪ್ರಜಾನಾಂವಿಷಶಸ್ತ್ರಾಗ್ನಿಭಯಂ ಭವತಿ। ರಕ್ತಮೇಘದರ್ಶನೇವೃಷ್ಟಿಪ್ರದಃ। ರವಿಸಂಕ್ರಮಣೇಮಧ್ಯಾರ್ಘಃ। ಪ್ರಥಮರಜಸ್ವಲಾಕನ್ಯಾಬಂಧಕೀಪುತ್ರವತೀಚಭವತಿ। ಉತ್ತರಾರ್ಧೇಶಾಂತಿಂಕುರ್ಯಾತ್। ಕರ್ಣವೇಧಕ್ಷೌರಕರ್ಮವಿಷಾಗ್ನಿಪ್ರಯೋಗಾಭಿಚಾರಮಂತ್ರಶಸ್ತ್ರಯುದ್ಧದ್ಯೂತಕ್ರಿಯಾ ದುರ್ವ್ಯವಹಾರಾಸ್ತ್ರಶಸ್ತ್ರಾಭ್ಯಾಸಭೂತೋಚ್ಚಾಟನಮಂತ್ರ ಯಂತ್ರೋದಾರಣದಾಸೀಭೃತ್ ಸಂಗ್ರಹಣ ಪರದ್ರವ್ಯಾಪಹರಣ ಪಶುಕ್ರಯ ವಿಕ್ರಯೇತ್ಯಾದಿ ಕಾರ್ಯೇಷುಪ್ರಶಸ್ತಂ। ಅಸ್ಮಿನ್ನಕ್ಷತ್ರೇಜಾತಸ್ಯ ಗುಣಾಃ। ಶ್ಯಾಮಲದೇಹಃ। ಬಹುಪುತ್ರವಾನ್। ಸ್ನೇಹ ಪರಃಸಂತುಷ್ಟಃ। ಸತ್ಯವಾದೀ। ದೃಢಕರಃ। ಸ್ತ್ರೀಲೋಲಃ। ಬಹುಶ್ರುತವಾನ್। ದೀರ್ಘನಾಸಿಕಃ। ಕುಕ್ಷಿಪ್ರದೇಶೆ ತಿಲಕಮತ್ಸ್ಯಾಂಕಿತಃ। ಅಥಅಂಶಗುಣಾಃ। ಪ್ರಥಮಪಾದಸ್ಯಗುರುಃ। ಉತ್ಸನ್ನಾಂಶಃ। ಲೇಖಕಃ। ಹಾಸ್ಯಕರಃ। ಗರ್ವಿ

